







# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ

ಸಂಪುಟ : ೨೪
ಸಂಚಿಕೆ : ೦೨
ಸೆಪ್ಟೆಂಬರ್ : ೨೦೨೧
ರೂ. ೧೫/-

## ಕ್ಷೇತ್ರ ವಾರ್ತೆಗಳು

### ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

### "ಗೊ.ರು.ಚ. ಶರಣ ಪ್ರಶಸ್ತಿ ಪ್ರದಾನ" ಸಮಾರಂಭ ದಿನಾಂಕ: ೨.೮.೨೦೨೧




ಮೈಸೂರು: ಪ್ರಶಸ್ತಿ ಪುರಸ್ಕೃತರು: ಡಾ.ಕುರುವ ಬಸವರಾಜ್, ಡಾ.ಎಚ್.ಟಿ. ಪೋತೆ, ಡಾ.ಬಿ.ಆರ್. ಪೋಲೀಸಪಾಟೀಲ, ಶ್ರೀ ಪಿ.ಡಿ. ವಾಲೀಕಾರ
ಚಿತ್ರದಲ್ಲಿ: ದಯಾನಂದ ಪಾಟೀಲ, ಡಾ.ಸಿಂ.ರಾ. ಹೊನ್ನಲಿಂಗಯ್ಯ, ಡಾ. ಗೊ.ರು. ಚನ್ನಬಸಪ್ಪ,
ಪೂಜ್ಯ ಜಗದ್ಗುರು ಡಾ. ಶ್ರೀ ತೋಂಟದ ಸಿದ್ಧರಾಮ ಮಹಾಸ್ವಾಮಿಗಳು, ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಡಾ. ಮಲೆಯೂರು ಗುರುಸ್ವಾಮಿ, ಮ.ಗು. ಸದಾನಂದಯ್ಯ, ಶಾರದಾ ಶಿವಲಿಂಗಸ್ವಾಮಿ, ಕೆ.ವಿ. ನಾಗರಾಜಮೂರ್ತಿ

### ಗೊ.ರು. ಚನ್ನಬಸಪ್ಪ ಅವರಿಗೆ 'ರಾಮಕೃಷ್ಣ ಹೆಗಡೆ ಪ್ರಶಸ್ತಿ"



ಚಿತ್ರದಲ್ಲಿ: ಕೆ.ಆರ್. ರಮೇಶ್‌ಕುಮಾರ್, ಟಿ.ಎನ್. ಸೀತಾರಾಂ, ಡಾ. ಎಂ.ಪಿ. ನಾಡಗೌಡ, ಕೆ.ವಿ. ನಾಗರಾಜಮೂರ್ತಿ,
ಟಿ. ಪ್ರಭಾಕರ್, ಮಮತಾ ನಿಚ್ಚಾಣಿ, ಡಾ.ಬಿ.ಎಲ್. ಶಂಕರ್

### ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು

ಬೆಂಗಳೂರು: ಕದಳಿ ಮಹಿಳಾ ವೇದಿಕೆ: ಶರಣರ ವಚನಗಳಲ್ಲಿ ಆರೋಗ್ಯ ಉಪನ್ಯಾಸ. ದಿನಾಂಕ: ೧೪.೮.೨೦೨೧
ಚಿತ್ರದಲ್ಲಿ: ಪ್ರೇಮಾ ಸೋಮಸುಂದರ್, ಡಾ. ವಿಜಯಲಕ್ಷ್ಮಿ ಬಾಳೆಕುಂದ್ರಿ, ಕೆ.ವಿ. ನಾಗರಾಜಮೂರ್ತಿ, ಚಿತ್ಕಲಾ ರವಿ, ಪ್ರಮೀಳಾ ಗರಡಿ, ರೇಣುಕಾ ಶಂಕರ್






# ಮಹಾಮನೆ

ಸೆಪ್ಟೆಂಬರ್ – ೨೦೨೧ ಸಂಪುಟ : ೨೪ ಸಂಚಿಕೆ : ೦೨

ಸಂಸ್ಥಾಪಕರು
ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು

ಸಂಪಾದಕ ಮಂಡಳಿ
ಅಧ್ಯಕ್ಷರು
ಗೊ.ರು. ಚನ್ನಬಸಪ್ಪ
ಸಂಪಾದಕರು
ಡಾ. ಎಂ.ಎಸ್. ಆಶಾದೇವಿ
ಸದಸ್ಯರು
ಡಾ. ಓ.ಎಲ್. ನಾಗಭೂಷಣಸ್ವಾಮಿ
ಪ್ರೊ. ಎಸ್.ಜಿ. ಸಿದ್ಧರಾಮಯ್ಯ
ಡಾ. ಶಿವಗಂಗಾ ರುಮ್ಮಾ

ಮುಖಪುಟದ ವಿನ್ಯಾಸ
ಮುರಳೀಧರ ವಿ. ರಾಠೋಡ

ಪ್ರಕಾಶಕರು
ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಕಾರ್ಯಾಲಯ
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ
ಜಯನಗರ ೮ನೆಯ ವಿಭಾಗ
ಬೆಂಗಳೂರು – ೫೬೦ ೦೭೦
ದೂ: ೦೮೦ – ೨೨೯೭ ೦೧೨೫
E-mail:
mahamanemagazine@gmail.com

ಸಂಚಿಕೆಯ ಅಂತರಂಗ

ಬಿನ್ನಹ ...... 

# ಮನವ ಮಡಿಯ ಮಾಡಬೇಕು ನಿಚ್ಚ

'ಮಡಿ' ಎನ್ನುವ ಶಬ್ದ – ಪರಿಕಲ್ಪನೆ ಭಾರತೀಯ ಸಮುದಾಯವನ್ನು ಆವರಿಸಿದಷ್ಟು ಕಾಡಿದಷ್ಟು ಮಿಕ್ಕಾವುದೂ ಕಾಡಿಲ್ಲವೇನೊ? ಮಡಿ ಎನ್ನುವುದು ಒಂದು ಮೌಲ್ಯವಾಗಿ, ಜೀವನ ಕ್ರಮವಾಗಿ ಇರುವಂತೆಯೇ ಭಾರತೀಯ ಸಮುದಾಯವನ್ನು ಒಡೆಯಲು ಈ ಪರಿಕಲ್ಪನೆಯೇ ಕಾರಣಕರ್ತವಾಗಿ ಖಳನಾಯಕನ ಪಾತ್ರವನ್ನು ವಹಿಸಿದ್ದೂ ಐತಿಹಾಸಿಕ ಸತ್ಯವೇ ಆಗಿದೆ. ದೇಹ, ಮನಸ್ಸು ಮತ್ತು ವ್ಯಕ್ತಿತ್ವಗಳ ಶುದ್ಧತೆಯನ್ನು ಕುರಿತಂತೆ ರೂಪಿತವಾದದ್ದು, ಮಡಿ ಎನ್ನುವ ಪರಿಕಲ್ಪನೆ. ದೇಹ ಮಾಲಿನ್ಯವು ನಿರಂತರವಾದುದು. ಈ ದೇಹ ಮಾಲಿನ್ಯವನ್ನು ಪ್ರತಿನಿತ್ಯ ಶುದ್ಧಗೊಳಿಸಿಕೊಳ್ಳದೆ ಹೋದರೆ, ಅದು ಹೊರಗಿನ ಮಾಲಿನ್ಯಕ್ಕೆ ಕಾರಣವಾಗುತ್ತದೆ. ಆದ್ದರಿಂದಲೇ 'ಶುಚಿರ್ಭೂತ' ರಾಗಬೇಕು ಎನ್ನುವುದು ಅಪೇಕ್ಷಣೀಯವಾದುದು ಹೌದು, ಕರಾರೂ ಹೌದು. ಇದು ವ್ಯಕ್ತಿಗತವಾದದ್ದೆಷ್ಟೋ ಅಷ್ಟೇ ಸಾಮುದಾಯಿಕವಾದದ್ದೂ ಹೌದು. ಸಮುದಾಯದ ಎಲ್ಲರೂ ಈ ಅರ್ಥದಲ್ಲಿ ಮಡಿಯಾಗಬೇಕು. ಆದರೆ ನಮ್ಮ ಸಮುದಾಯದ ಪಟ್ಟಭದ್ರ ಶಕ್ತಿಗಳ ಕ್ರೌರ್ಯ ಅದೆಷ್ಟು ತೀವ್ರವಾದುದೆಂದರೆ ಅಲ್ಪಸಂಖ್ಯಾತ ಮೇಲ್ಜಾತಿಯವರನ್ನು ಬಿಟ್ಟು, ಮಿಕ್ಕವರು ದೈಹಿಕವಾಗಿ ಪ್ರತಿನಿತ್ಯ ಮಡಿಯಾಗಬೇಕಾಗಿಲ್ಲ ಎನ್ನುವುದನ್ನು ತಮ್ಮ ಶ್ರೇಷ್ಠತೆಯನ್ನು ಸ್ಥಾಪಿಸಲು ಬಲವಾದ ಅಸ್ತ್ರವಾಗಿ ಬಳಸಿಕೊಂಡರು. ಮುಂದೆ ಇವೇ ಅಂಶವನ್ನೇ ಕೆಳಜಾತಿಯವರನ್ನು ಕೆಳಜಾತಿಯವರೆಂದು, ಅಸ್ಪೃಶ್ಯರೆಂದು, ಶ್ವಪಚರೆಂದು ಗುರುತಿಸಿ, ದೂರವಿಡಲು ಸಕಾರಣ ಎನ್ನುವ ಮಿಥ್ಯೆಯನ್ನು ಪ್ರಶ್ನಾತೀತವಾಗಿ ಸ್ಥಾಪಿಸಿಬಿಟ್ಟರು. ಎಂದರೆ 'ಮನೋಮಡಿ'ಯೇ ಇಲ್ಲದವರು ದೇಹಮಡಿಯನ್ನು ಮಾತ್ರ ಎತ್ತಿಹಿಡಿದರು. ಇಡೀ ಶರಣ ಚಳುವಳಿಯೇ ಈ ಮಿಥ್ಯೆಯನ್ನು ಒಡೆಯುವ ಹಂಬಲದ್ದಾಗಿತ್ತು. ಹೊರಮಡಿಗಿಂತ ಒಳಮಡಿಯೇ ಮುಖ್ಯವೆಂದು ಅಪ್ಪಟವೆಂದು ಹೇಳಬಹುದಾದ ಎಲ್ಲ ದಾರಿಗಳಲ್ಲೂ ಇವರು ಹೇಳಲು ಪ್ರಯತ್ನಪಟ್ಟರು. ಮನಸ್ಸು ಕೂಡ ಪ್ರತಿನಿತ್ಯ ಕೊಳೆಯಾಗುವ ದೇಹದಂತೆ, ನಮ್ಮ ಬುದ್ಧಿಭಾವಗಳನ್ನು ತೊಳೆದು, ತೊಳೆದು ಶುದ್ಧಗೊಳಿಸಿಕೊಳ್ಳಬೇಕಾದ್ದು ಮನುಷ್ಯರಾಗುವ, ಮನುಷ್ಯರಾಗಿಯೇ ಉಳಿಯುವ ಪ್ರಕ್ರಿಯೆಯ ಮೂಲಕ್ರಿಯೆ ಎನ್ನುವುದನ್ನು ಇವರಷ್ಟು ಆರ್ದ್ರವಾಗಿ ಮತ್ತಾವ ಕ್ರಾಂತಿಕಾರಿಗಳೂ ಹೇಳಿಲ್ಲ ಎನಿಸುತ್ತದೆ.

ಈ ತಿಂಗಳು ಮಡಿವಾಳ ಮಾಚಯ್ಯನವರ ಜಯಂತಿ ಇದೆ. ಆ ನೆಪದಲ್ಲಿ, ಕಾರಣದಲ್ಲಿ ಈ ಮಾತುಗಳನ್ನು ಪುನರುಕ್ತಿ ಎನ್ನುವಂತೆ ನೆನಪಿಸಿಕೊಂಡಿದ್ದೇನೆ. ಬಟ್ಟೆಗಳ ಮಡಿಯನ್ನೂ ಮನದ ಮಡಿಯನ್ನೂ ಸಾರಿದ ಮಡಿವಾಳ ಮಾಚಯ್ಯನವರನ್ನು ನೆನಪಿಸಿಕೊಳ್ಳುವುದೇ ನಮ್ಮ ಜನಪದ ಕವಯತ್ರಿ ಹೇಳುವಂತೆ 'ತಾಯಿ ಗಂಗವ್ವನ ನೆನೆದಾರೆ ಮಾಸಿದ ತಲೆಯೂ ಮಡಿಯಾಯ್ತು' ಎನ್ನುವಷ್ಟು ಪವಿತ್ರವಾದದ್ದು.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**



ಅಧ್ಯಕ್ಷರ ನುಡಿ

# ಸ್ವಾತಂತ್ರ್ಯವೆಂದರೆ ಹೊಣೆಗಾರಿಕೆ

ಕಳೆದ ತಿಂಗಳಷ್ಟೇ ನಾವು ಭಾರತ ಸ್ವಾತಂತ್ರ್ಯದ ವಜ್ರಮಹೋತ್ಸವವನ್ನು ಆಚರಿಸಿದ್ದೇವೆ. ನಮ್ಮ ಸ್ವಾತಂತ್ರ್ಯ ವಜ್ರದಷ್ಟು ಘನವಾಗಿದೆ, ಭದ್ರವಾಗಿದೆ ಎಂದು ಹೇಳಿಕೊಂಡು ಹೆಮ್ಮೆಪಟ್ಟಿದ್ದೇವೆ. ನವಭಾರತ ನಿರ್ಮಾಣದ ಹೊಸ ಸಂಕಲ್ಪ ಮಾಡಿದ್ದೇವೆ. ನಮ್ಮ ಸ್ವಾತಂತ್ರ್ಯ ಅಬಾಧಿತವೆಂದು ಕುಣಿದಾಡಿದ್ದೇವೆ. ಕಟ್ಟಡಗಳ ಮೇಲೆ, ವಾಹನಗಳ ಮೇಲೆ ರಾಷ್ಟ್ರಧ್ವಜ ಹಾರಿಸಿ ಅಡ್ಡಾಡಿದ್ದೇವೆ. 'ನಾವು ಸರ್ವತಂತ್ರ ಸ್ವತಂತ್ರರು' ಎಂದು ಘೋಷಿಸಿದ್ದೇವೆ. ಜನತಂತ್ರದಲ್ಲಿ ಇದೆಲ್ಲ ಸಹಜ; ಸ್ವಾಭಾವಿಕ.

ಆದರೆ, ಕಳೆದ ೭೫ ವರ್ಷಗಳಲ್ಲಿ, ಈ ಸ್ವಾತಂತ್ರ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ, ಅದಕ್ಕೂ ಒಂದು ಮಿತಿಯಿದೆ ಎಂಬುದನ್ನು ತಿಳಿಯದೆ, ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರ ಎಂದೇ ತಿಳಿದು ನಡೆದುಕೊಂಡದ್ದೇ ಹೆಚ್ಚು ಎಂದು ನನಗನಿಸುತ್ತದೆ. ಇದಕ್ಕೆ ನನ್ನ ತಿಳಿವಳಿಕೆಯ ಮಿತಿಯೂ ಕಾರಣವಿರಬಹುದು.

ವರ್ತಮಾನದ ವಿದ್ಯಮಾನಗಳನ್ನು ಗಮನಿಸಿದರೆ, ನಾವು ಪರಕೀಯ ಆಡಳಿತದಿಂದ ಬಿಡುಗಡೆಯಾಗಿದ್ದರೂ, ಸ್ವಕೀಯ ಆಡಳಿತದಲ್ಲೂ ಮತ್ತೊಂದು ರೀತಿಯ ದಾಸ್ಯದಲ್ಲೇ ಇದ್ದೇವೆ. ಈ ದಾಸ್ಯಕ್ಕೆ ಬೇರಾರೂ ಕಾರಣರಲ್ಲ. ನಾವೇ ಕಾರಣ; ನಾವು ಆರಿಸಿದ ಜನಪ್ರತಿನಿಧಿಗಳೇ ಕಾರಣ. ನಾವ ಪರಸ್ಪರ ದಾಸ್ಯ ಹೇರಿಕೊಂಡಿದ್ದೇವೆ. ನಾವು ಆಳುವ ಸ್ಥಾನದಲ್ಲಿರುವ ಕಾರಣ ಜನ ನಮ್ಮ ಅಧೀನರೆಂದು ಅಧಿಕಾರ ಹಿಡಿದಿರುವ ಜನಪ್ರತಿನಿಧಿಗಳು ತಿಳಿದಿದ್ದಾರೆ; ನಾವು ಮತದಾನ ಮಾಡಿ ಆರಿಸಿದ ಪ್ರತಿನಿಧಿಗಳಾದ ಕಾರಣ ಅವರು ನಮ್ಮ ಅಧೀನರು ಎಂದು ನಾವು ತಿಳಿದಿದ್ದೇವೆ. ನಾವೂ ಸ್ವತಂತ್ರರೇ; ನಮ್ಮ ಜನ ಪ್ರತಿನಿಧಿಗಳೂ ಸ್ವತಂತ್ರರೇ. ಆದರೂ ಇಬ್ಬರೂ 'ನಾವು ಏನು ಮಾಡಿದರೂ ನಡೆಯುತ್ತದೆ' ಎಂದು ತಿಳಿದವರೇ. ಎಂತಲೇ ಜನರೂ ತಮ್ಮ ಸುತ್ತ ತಾವೇ ಜಾಲ ಹೆಣೆದುಕೊಳ್ಳುತ್ತಿದ್ದಾರೆ; ಜನಪ್ರತಿನಿಧಿಗಳೂ ತಮ್ಮ ಅಧಿಕಾರದ ಅಸ್ತಿತ್ವ ಉಳಿಸಿಕೊಳ್ಳಲು ಜನಕ್ಷೇಮದ ಹೆಸರು ಹೇಳುತ್ತಲೇ ಮನಬಂದಂತೆ ವರ್ತಿಸುತ್ತಿದ್ದಾರೆ. ಇಬ್ಬರು ಜಪಿಸುವುದೂ ಸ್ವಾತಂತ್ರ್ಯದ ಮಂತ್ರವನ್ನೇ.

ಆದರೆ, ಸ್ವಾತಂತ್ರ್ಯಕ್ಕೂ ಒಂದು ಗತಿ ಇದೆ, ಮಿತಿ ಇದೆ ಎಂಬುದನ್ನು ಯಾರೂ ಅರ್ಥಮಾಡಿಕೊಂಡಂತಿಲ್ಲ. ಒಂದು ಅರ್ಥಪೂರ್ಣ ದೃಷ್ಟಾಂತವಿದೆ. ಒಬ್ಬ 'ವಿಚಾರವಾದಿ' ಯುವಕ ಓರ್ವ ಸಂತನ ಬಳಿಗೆ ಹೋಗಿ, "ಮನುಷ್ಯ ಎಷ್ಟರಮಟ್ಟಿಗೆ ಸ್ವತಂತ್ರ? ಅವನು ಪೂರ್ಣ ಸ್ವತಂತ್ರನೆ? ಅಥವಾ ಆ ಸ್ವಾತಂತ್ರ್ಯಕ್ಕೆ ಏನಾದರೂ ಇತಿ–ಮಿತಿಗಳಿವೆಯೆ? ನಮ್ಮ ಸ್ವಾತಂತ್ರ್ಯವನ್ನು ನಿಯಂತ್ರಿಸುವ ದೇವರಿದ್ದಾನೆಯೆ? ಶಾಸ್ತ್ರ ಗ್ರಂಥಗಳು, ಪುರೋಹಿತರು ಹೇಳುವ ಅದೃಷ್ಟ, ವಿಧಿ, ಹಣೆಬರಹ, ಕರ್ಮ ಇಂಥವೆಲ್ಲ ಇದೆಯೆ?" ಎಂದೆಲ್ಲ ಕೇಳಿದ.

ಅದಕ್ಕೆ ಸಂತ "ನೀನು ಕೇಳಿದ ಎಲ್ಲವಕ್ಕೂ ಒಮ್ಮೆಲೇ ಉತ್ತರಿಸಲಾಗುವುದಿಲ್ಲ. ನಿನ್ನ ಮೊದಲ ಪ್ರಶ್ನೆಯನ್ನಷ್ಟೆ ಈಗ ವಿಚಾರ ಮಾಡೋಣ. ಆಗಬಹುದೆ?" ಎಂದ. ವಿಚಾರವಾದಿ ಆಗಬಹುದೆಂದು ತಲೆಯಾಡಿಸಿದ.

ಆಗ ಸಂತ, 'ನನ್ನ ಉತ್ತರಕ್ಕಿಂತ ಮುಂಚೆ ನಿನಗೊಂದು ಸೂಚನೆ. ಅದನ್ನು ಒಂದು ಕೋರಿಕೆಯೆಂದೇ ನೀನು ತಿಳಿಯಬೇಕು' ಎಂದ. ಅದಕ್ಕೆ ವಿಚಾರವಾದಿ 'ನಿಮ್ಮ ಸೂಚನೆ ಏನು?' ಎಂದು ಕೇಳಿದ. 'ಸ್ವಲ್ಪ ಎದ್ದು ನಿಲ್ಲು' ಎಂದ ಸಂತ. ಆ ಸೂಚನೆ ಕೇಳಿ, ಆ ವ್ಯಕ್ತಿಗೆ ವಿಚಿತ್ರವೆನಿಸಿತು. 'ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರಕೊಡುವ ಬದಲು 'ಎದ್ದು ನಿಲ್ಲು' ಎನ್ನುತ್ತಾನಲ್ಲ. ಸಂತನಾಗಿ ಸ್ವಲ್ಪವಾದರೂ ಸಜ್ಜನಿಕೆ ಬೇಡವೆ?' ಎಂದೆನಿಸಿದರೂ ನೋಡೋಣ ಎಂದು ಎದ್ದು ನಿಂತ.

ಆಗ ಸಂತ, "ಈಗ ನಿನ್ನ ಬಲಗಾಲನ್ನು ಮೇಲಕ್ಕೆ ಎತ್ತು" ಎಂದ. ಇದನ್ನು ಕೇಳಿದ ವಿಚಾರವಾದಿಗೆ 'ತಾನು ತಪ್ಪು ಮಾಡಿಬಿಟ್ಟೆ. ಈ ಸಂತ ಎಂತಹ ಹುಚ್ಚನಿದ್ದಾನೆ? ನಾನು ಕೇಳಿದ್ದು ಸ್ವಾತಂತ್ರ್ಯದ ಬಗೆಗೆ. ನಾನು ಎದ್ದು ನಿಲ್ಲುವುದಕ್ಕೂ, ಒಂದು ಕಾಲನ್ನು ಮೇಲೆತ್ತಿ ನಿಲ್ಲುವುದಕ್ಕೂ ಸ್ವಾತಂತ್ರ್ಯಕ್ಕೂ ಏನು ಸಂಬಂಧ? ಆದರೂ ಬಂದುಬಿಟ್ಟಾಗಿದೆ. ಮುಂದೇನಾಗುವುದೋ ನೋಡೋಣ' ಎಂದು ಮನಸ್ಸಿನಲ್ಲೇ ಅಂದುಕೊಂಡು ತನ್ನ ಬಲಗಾಲು ಎತ್ತಿ ಒಂಟಿಕಾಲಲ್ಲಿ ನಿಂತ.

ಅದನ್ನು ನೋಡಿದ ಸಂತ, "ನೀನು ಒಂಟಿಕಾಲಲ್ಲಿ ನಿಂತಿರುವುದು ತುಂಬಾ ಕ್ರಮಬದ್ಧವಾಗಿದೆ. ನನ್ನ ಇನ್ನೊಂದು ಸೂಚನೆ ಎಂದರೆ, ನಿನ್ನ ಎಡಗಾಲನ್ನು ಮೇಲಕ್ಕೆ ಎತ್ತು" ಎನ್ನುವುದು. ಅದೆಂತಾದರೂ ಸಾಧ್ಯವೆ? ಒಂಟಿಕಾಲಿನ ಮೇಲೆಯೇ ಹೆಚ್ಚು ಹೊತ್ತು ನಿಲ್ಲಲು ಸಾಧ್ಯವಾಗುವುದಿಲ್ಲ. ಇನ್ನು ಎರಡೂ ಕಾಲುಗಳನ್ನು ಮೇಲಕ್ಕೆತ್ತಿ ನಿಲ್ಲುವುದು ಹೇಗೆ? ಸಂತ ಒಬ್ಬ ಹುಚ್ಚ ಎಂಬುದು ಆ ವಿಚಾರವಾದಿಗೆ ಖಚಿತವಾದಂತಾಗಿ, "ಇದೇನಿದು? ಸಾಧ್ಯವಾಗದುದನ್ನು ಮಾಡಲು ಹೇಳುತ್ತಿದ್ದೀರಲ್ಲಾ. ನಾನು ಎಡಗಾಲನ್ನೂ ಮೇಲಕ್ಕೆತ್ತಿದ್ದರೆ ನಿಲ್ಲುವುದು ಹೇಗೆ? ಕೆಳಗೆ ಬಿದ್ದುಬಿಡುತ್ತೇನೆ ಅಷ್ಟೆ" ಎಂದ.

ಅದಕ್ಕೆ ಸಂತ, "ನೀನು ಸ್ವತಂತ್ರನಿದ್ದೀಯೆ. ನಾನು ಹೇಳಿದಾಗ ಮೊದಲು ನಿನ್ನ ಬಲಗಾಲನ್ನು ಮೇಲಕ್ಕೆತ್ತಿದೆ. ಹಾಗೆಯೇ ಎಡಗಾಲನ್ನೂ ಮೇಲಕ್ಕೆತ್ತಬಹುದಾಗಿತ್ತು. ನೀನು ಸ್ವತಂತ್ರ. ನಿನಗೆ ಯಾವುದೇ ನಿರ್ಬಂಧವಿಲ್ಲ. ನಿನ್ನ ಕಾಲುಗಳೆರಡೂ ನಿನ್ನ ಅಧೀನ. ಯಾವ ಕಾಲನ್ನು ಮೊದಲು ಎತ್ತಬೇಕು ಎಂದು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವೂ ನಿನಗಿತ್ತು. ಅಂತಹ ಸ್ವಾತಂತ್ರ್ಯವಿರುವ ನಿನಗೆ ನಿನ್ನದೇ ಆದ ಇನ್ನೊಂದು ಕಾಲನ್ನು ಎತ್ತಲು ಸಾಧ್ಯವಾಗುತ್ತಿಲ್ಲ. ಅಯ್ಯಾ, ನಿನ್ನ ಸ್ವಾತಂತ್ರ್ಯದ ಮಿತಿಯೂ ಅಷ್ಟೆ. ಸುಮ್ಮನೆ ಅದೃಷ್ಟ, ವಿಧಿ, ಹಣೆಬರಹ, ಕರ್ಮ –ಎಂದೆಲ್ಲ ತಲೆಕೆಡಿಸಿಕೊಳ್ಳುವ ಬದಲು ನಿನಗಿರುವ ಮಿತಿಯನ್ನು ಅರ್ಥಮಾಡಿಕೊಂಡರೆ ಸಾಕು" ಎಂದ. ಗೊಂದಲಗೊಂಡಿದ್ದ ಆ ವಿಚಾರವಾದಿ ಗಂಭೀರ ಚಿಂತನೆಗೆ ತೊಡಗಿದ.

ಬದುಕಿನ ನಮ್ಮೆಲ್ಲ ಕ್ರಿಯೆಗಳಿಗೆ, ನಿರ್ಧಾರಗಳಿಗೆ ತಮ್ಮದೇ ಆದ ಒಂದು ಮಿತಿ ಇರುತ್ತದೆ. ಯಾರೂ ನಮ್ಮ ಮೇಲೆ ನಿರ್ಬಂಧ ಹೇರದಿದ್ದರೂ ನಾವು ಆ ಮಿತಿಗೆ



ಅಧೀನವೆಂಬುದರಿಂದ ತಪ್ಪಿಸಿಕೊಳ್ಳಲಾಗದು. ಅದು ನಿಸರ್ಗನಿಯಮ. ಎರಡೂ ಕಾಲುಗಳನ್ನು ಒಮ್ಮೆಲೇ ಮೇಲೆತ್ತಲು ಸಾಧ್ಯವಾಗದು. ಆ ನಿಯಮದ ವಿರುದ್ಧ ನಡೆದೆವೆಂದರೆ ಬೀಳುವುದು ನಿಶ್ಚಿತವೆಂದು ಬೇರೆ ಹೇಳಬೇಕಾಗಿಲ್ಲ. ನಿಸರ್ಗ ನಿಯಮ ಒಂದು ಕ್ಷೇಮದ ಕ್ರಮ.

ನಮ್ಮ ಸ್ವಾತಂತ್ರ್ಯವನ್ನು ಹೇಗೆ ಬಳಸಿಕೊಳ್ಳಬೇಕೆಂಬುದಕ್ಕೆ ಮೇಲಿನ ದೃಷ್ಟಾಂತ ಸಾಕೆಂದು ಕಾಣುತ್ತದೆ. ಸ್ವಾತಂತ್ರ್ಯವೆಂದರೆ ಸ್ವಚ್ಛಂದತೆಯಲ್ಲ. ಅದಕ್ಕೆ ಹೊಣೆಗಾರಿಕೆಯೂ ಇದೆ; ಹೊಣೆಗಾರಿಕೆಯ ಬದ್ಧತೆಯೂ ಇದೆ. ಇದನ್ನು ನಮ್ಮ ಸಂವಿಧಾನ ಸ್ಪಷ್ಟವಾಗಿ ಘೋಷಿಸಿದೆ. ಆದರೆ ನಮ್ಮ ಹೊಣೆಗೇಡಿತನದಿಂದಾಗಿ, ಅಬದ್ಧತೆಯಿಂದಾಗಿ ಸ್ವಾತಂತ್ರ್ಯ ಬಂದು ೭೫ ವರ್ಷಗಳಾದರೂ ದಿನದಿನಕ್ಕೆ ಜನಜೀವನದ ಸಮಸ್ಯೆಗಳು ಹೆಚ್ಚುತ್ತಲೇ ಇವೆ. ಸ್ವಾತಂತ್ರ್ಯದ ಈ ವಜ್ರಮಹೋತ್ಸವ ಸಂದರ್ಭದಲ್ಲಾದರೂ ನಮ್ಮ ಜನ ಮತ್ತು ಜನಪ್ರತಿನಿಧಿಗಳು ಆತ್ಮನಿರೀಕ್ಷೆ ಮಾಡಿಕೊಂಡು ಸಂವಿಧಾನದ ಆಶಯದಂತೆ ರಾಷ್ಟ್ರದ ಭೌತಿಕ ಮತ್ತು ನೈತಿಕ ಸಮಗ್ರತೆಗಳನ್ನು ಸಂರಕ್ಷಿಸುವ ಸಂಕಲ್ಪ ಮಾಡುವಂತಾಗಬೇಕು.

ಅಲ್ಲಮನ ಒಂದು ವಚನ: "ಒಂದೆ ಹೂ. ಒಂದೆ ಅಗ್ಘವಣಿ, ಒಂದೆ ಓಗರ, ಒಂದೆ ಪ್ರಸಾದ, ಒಂದೆ ಮನೆ, ಒಂದೆ ಲಿಂಗ. ನಂದಾದೀವಿಗೆ ಕುಂದದ ಬೆಳಕು. ಸ್ವತಂತ್ರ ಪೂಜೆ ಒಂದೇ. ಅನಾಹತ ಎರಡಾಗಿ ಬಹುಮುಖರಾಗಿ ಕೆಟ್ಟುಹೋದರು ಗುಹೇಶ್ವರಾ" ಅಂತೆಯೇ ನೆಲವೊಂದೇ, ಜಲವೊಂದೇ, ಸುಳಿಯುವ ಗಾಳಿಯೊಂದೇ, ನಮ್ಮ ಸಂವಿಧಾನವೊಂದೇ, ಆಶಯವೊಂದೇ. ನಾವು ಪರಸ್ಪರ ವಿರುದ್ಧ ಮುಖವಾಗಿ ಕೆಡುವುದು ಬೇಡ!

**ಗೊ.ರು. ಚನ್ನಬಸಪ್ಪ**



**ಅನವರತ ಮಾಡಿಹೆನೆಂದು ಉಪ್ಪರ ಗುಡಿಯ ಕಟ್ಟಿ ಮಾಡುವ**
**ಭಕ್ತನ ಮನೆಯದು ಲಂದಣಗಿತ್ತಿಯ ಮನೆ**
**ಸರ್ವಜೀವದಯಾಪಾರಿಯೆಂದು ಭೂತದೇಹಕಿಕ್ಕುವನ ಮನೆ**
**ಸಯಿದಾನದ ಕೇಡು**
**ಸೂಳೆಯ ಮಗ ಮಾಳವ ಮಾಡಿದಡೆ**
**ತಾಯ ಹೆಸರಾಯಿತ್ತಲ್ಲದೆ**
**ತಂದೆಯ ಹೆಸರಿಲ್ಲ ಕೂಡಲಸಂಗಮದೇವಾ.**

# ಸಂಗೀತ ಕ್ಷೇತ್ರದ ತವನಿಧಿ
# ಪದ್ಮಭೂಷಣ ಪಂಡಿತ ಪುಟ್ಟರಾಜ ಗವಾಯಿಗಳು

**ಎಚ್.ಎಸ್. ಸಿದ್ಧಗಂಗಪ್ಪ**

*ನಂ. ೧೬೧೭, 'ಮಾತೃಶ್ರೀ', ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ*
*೮ನೆ ಬ್ಲಾಕ್, ವಿಶ್ವನೀಡಂ ಅಂಚೆ, ಸ್ಫೂರ್ತಿಧಾಮದ ಎದುರು*
*ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧*
*೯೮೪೫೫ ೬೫೮೭೧*

ಕರ್ನಾಟಕದ ಪುಣ್ಯಭೂಮಿಯಲ್ಲಿ ಅನೇಕ ಜನ ಪುಣ್ಯಪುರುಷರು ಜನಿಸಿ ಲೋಕ ಕಲ್ಯಾಣಕ್ಕಾಗಿ ತಮ್ಮ ಬದುಕನ್ನೇ ಅರ್ಪಿಸಿಕೊಂಡವರಲ್ಲಿ ಪದ್ಮಭೂಷಣ ಪಂಡಿತ ಪುಟ್ಟರಾಜ ಗವಾಯಿಗಳು ಒಬ್ಬರು ಎಂದು ಹೇಳುವಾಗ ಮನಸ್ಸು ಪುಳಕಿತವಾಗುತ್ತದೆ. ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಅವರು ಮಾಡಿದ ಸಾಧನೆ ಅನುಪಮ, ಚಾರಿತ್ರಕವಾದುದು. ಸಾವಿರಾರು ಜನ ಕಣ್ಣಿದ್ದವರಿಗೆ, ಕಣ್ಣಿಲ್ಲದವರಿಗೆ ಸಂಗೀತವನ್ನು ಧಾರೆ ಎರೆದು ಸ್ವಾಭಿಮಾನದಿಂದ ಜೀವನ ನಡೆಸಲು ದಾರಿದೀಪವಾಗಿದ್ದಾರೆ. ಸಮಾಜದಲ್ಲಿ ಕಣ್ಣಿಲ್ಲವೆಂದು ನಿರ್ಲಕ್ಷಕ್ಕೆ ಒಳಗಾದವರಿಗೆ ಆಶ್ರಯ ನೀಡಿ ಸಂಗೀತ ಕಲಿಸಿ ಸಮಾಜದ ಮುಖ್ಯವಾಹಿನಿಯಲ್ಲಿ ಬೆಳಕಿನ ಹಾದಿಯನ್ನು ತೋರಿಸಿದ ಮಹಾಮಹಿಮರು, ತಮ್ಮನ್ನು ಸಂಪೂರ್ಣವಾಗಿ ಸಂಗೀತ ಸೇವೆಗಾಗಿ ಅರ್ಪಿಸಿಕೊಂಡ ಸ್ವರ ಸಾಮ್ರಾಟರು.

**ಜನನ :** ಜನಿಸಿದ್ದು ಹಾವೇರಿ ತಾಲ್ಲೂಕಿನ ಕರ್ಜಗಿ ಸಮೀಪದ ದೇವಗೇರಿ ಎಂಬ ಪುಣ್ಯಗ್ರಾಮ. ದೇವಗಿರಿ ತಾಯಿಯ ತವರು ಮನೆ. ಹುಟ್ಟಿದ ವರ್ಷ ಮಾರ್ಚ್ ೩, ೧೯೧೪. ತಂದೆ ಶರಣ ರೇವಣಯ್ಯ, ತಾಯಿ ಶರಣೆ ಶ್ರೀಮತಿ ಸಿದ್ಧಮ್ಮ. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ಪುಟ್ಟಯ್ಯ. ಈ ಪುಟ್ಟಯ್ಯ ಬೆಳೆಯುತ್ತ ಇಡೀ ಭಾರತಕ್ಕೆ ದೊಡ್ಡಯ್ಯನಾಗುತ್ತಾನೆಂದು ಆಗ ಯಾರೂ ಊಹಿಸಿರಲಿಲ್ಲ. ತಾಯಿಯ ಪ್ರೀತಿಯ ಮಡಿಲಲ್ಲಿ ಆರೈಕೆ, ಹಾರೈಕೆಯಿಂದ ಬೆಳೆಯುತ್ತಿದ್ದ ಆರು ತಿಂಗಳ ಮಗುವಿನ ಮೇಲೆ ವಿಧಿಯ ಕ್ರೂರ ದೃಷ್ಟಿ ಬಿದ್ದು ಬೆಳಕನ್ನು ಕಾಣುತ್ತಿದ್ದ ಈ ಹಸುಗೂಸಿನ ಎರಡು ಕಣ್ಣುಗಳು ನಂದು ಹೋದವು. ಸಂತೋಷವೇ ತುಂಬಿ ತುಳುಕುತ್ತಿದ್ದ ಮನೆಯಲ್ಲಿ ಕತ್ತಲು ಆವರಿಸಿತು. ತಂದೆ ತಾಯಿಗಳಿಗೆ ಒಮ್ಮೇಲೆ ಬರಸಿಡಿಲು ಎರಗಿದಂತಾಯಿತು. ತಂದೆ ರೇವಣಯ್ಯನವರು ಮನೆಯ ನಂದಾದೀಪವಾಗಬೇಕಾಗಿದ್ದ ಮಗುವಿಗೆ ಹೀಗಾಯಿತಲ್ಲಾ ಎಂಬ ಕೊರಗಿನಲ್ಲಿಯೇ ಇಹಲೋಕವನ್ನು ತ್ಯಜಿಸಿದರು. ಇದರಿಂದ ಪುಟ್ಟಯ್ಯನ ತಾಯಿಗೆ ದಿಕ್ಕೆತೋಚದಂತಾಯಿತು.



ತಂದೆಯನ್ನು ಕಳೆದುಕೊಂಡ ನತದೃಷ್ಟ ಮಗುವಿನ ಭವಿಷ್ಯವನ್ನು ರೂಪಿಸುವ ಹೊಣೆಯನ್ನು ಸೋದರಮಾವ ಚಂದ್ರಶೇಖರಯ್ಯನವರು ಹೊತ್ತುಕೊಂಡರು.

ಪುಟ್ಟಯ್ಯನಿಗೆ ಹೊರಗಣ್ಣು ಇಲ್ಲದೆ ಇದ್ದರೂ ಒಳಗಣ್ಣು ಸದಾ ಜಾಗೃತವಾಗಿತ್ತು. ಗ್ರಹಿಕಾಶಕ್ತಿ ಉಜ್ವಲವಾಗಿತ್ತು. ಮನೆಯಲ್ಲಿ ಎಲ್ಲರೂ ಪ್ರೀತಿಯಿಂದ ಪುಟ್ಟರಾಜ ಎಂದು ಕರೆಯುತ್ತಿದ್ದರು. ಈ ಪುಟ್ಟರಾಜ ಮುಂದೆ ಸಂಗೀತ ಕ್ಷೇತ್ರದಲ್ಲಿ ದೊಡ್ಡರಾಜನಾಗುತ್ತಾನೆಂಬ ಕುರುಹು ಬಾಲ್ಯದಲ್ಲಿಯೇ ಗೋಚರವಾಗುತ್ತಿತ್ತು. ತನ್ನ ೪ನೇ ವಯಸ್ಸಿನಲ್ಲಿಯೇ ಸಂಗೀತದಲ್ಲಿ ವಿಶೇಷ ಆಸಕ್ತಿಯನ್ನು ಬೆಳೆಸಿಕೊಂಡು ತತ್ತ್ವಪದಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದದನ್ನು ಗಮನಿಸಿದ ಸೋದರ ಮಾವ ಸಂಗೀತ ಕಲಿಸುವುದು ಸೂಕ್ತವೆಂದು ಭಾವಿಸಿ ಗಾನಗಂಧರ್ವ ಪಂಚಾಕ್ಷರಿ ಗವಾಯಿಗಳೇ ಇವನಿಗೆ ಸೂಕ್ತ ಗುರುವೆಂದು ನಿರ್ಧರಿಸಿ ತಡಮಾಡದೆ ಕಾರ್ಯೋನ್ಮುಖರಾದರು. ಪಂಚಾಕ್ಷರಿ ಗವಾಯಿಗಳು ನವಲಗುಂದದಲ್ಲಿ ತಮ್ಮ ಶಿಷ್ಯರೊಂದಿಗೆ ಗವಿಮಠದಲ್ಲಿ ವಾಸ್ತವ್ಯ ಮಾಡಿದ್ದರು. ಒಂದು ದಿನ ರಾತ್ರಿ ಪೂಜೆ ವೇಳೆಗೆ ಬಾಲಕ ಪುಟ್ಟರಾಜನನ್ನು ಕರೆದುಕೊಂಡು ಗವಿಮಠಕ್ಕೆ ಬಂದರು. ಪಂಚಾಕ್ಷರಿ ಗವಾಯಿಗಳು ಶಿವಯೋಗಾನುಷ್ಠಾನದಿಂದ ಎಚ್ಚತ್ತ ಮೇಲೆ ಭಕ್ತಿಯಿಂದ ನಮಸ್ಕಾರ ಮಾಡಿದ. ಅವನ ತಲೆಯ ಮೇಲೆ ಶಿವಹಸ್ತದಿಂದ ಕೈಯ್ಯಾಡಿಸಿ ಕುಮಾರೇಶ ಕಳಿಸಿದೇನಪ್ಪಾ, ನನ್ನ ಬಹುದಿನಗಳಿಂದ ಕಾತುರದಿಂದ ನಿರೀಕ್ಷಿಸಿದ್ದ ಕಾಲ ಈಗ ಕೂಡಿ ಬಂತು ಎಂದು ಪ್ರೀತಿಯಿಂದ ಆಶೀರ್ವಾದ ಮಾಡಿ ಶಿಷ್ಯನನ್ನಾಗಿ ಸ್ವೀಕರಿಸಿದರು.

ಸಂಗೀತ ಹಾಗೂ ಆಧ್ಯಾತ್ಮಿಕತೆ ಶಿಕ್ಷಣವನ್ನು ಪಡೆಯಲು ಪುಟ್ಟರಾಜು ಅವರ ಅಂಧತ್ವ ಎಂದೂ ಅಡ್ಡಿಯಾಗಲಿಲ್ಲ. ಕಣ್ಣಿಲ್ಲದವರು ನಾಚುವಂತೆ ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಒಮ್ಮೆ ಪಂಡಿತ ಪಂಚಾಕ್ಷರಿ ಗವಾಯಿಗಳು ಹೊಳೆ ಆಲೂರಿನಲ್ಲಿ ಭಕ್ತರ ಅಪೇಕ್ಷೆಯ ಮೇರೆಗೆ ಬೀಡು ಬಿಟ್ಟಿದ್ದ ಸಂದರ್ಭದಲ್ಲಿ ಪುಟ್ಟರಾಜ ಅವರ ತಾಯಿ ಸಿದ್ಧಮ್ಮ ಮಗನನ್ನು ಕರೆದುಕೊಂಡು ಹೋಗಲು ಬಂದರು. ತನ್ನ ಮನದಾಳದ ಬಯಕೆಯನ್ನು ಗುರುಗಳಲ್ಲಿ ವಿನಂತಿಸಿಕೊಂಡರು. ಅದಕ್ಕೆ ಪಂಚಾಕ್ಷರಿ ಗವಾಯಿಗಳು ಪುಟ್ಟರಾಜ ಬಂದರೆ ಕರೆದುಕೊಂಡು ಹೋಗವ್ವಾ ಎಂದರು. ಮಗ ತನ್ನ ಮಾತಿಗೆ ಸ್ಪಂದಿಸುತ್ತಾನೆಂದುಕೊಂಡಿದ್ದ ತಾಯಿಗೆ ಪುಟ್ಟರಾಜುನ ಮಾತಿನಿಂದ ಆಕಾಶವೇ ಮೇಲೆ ಕಳಚಿ ಬಿದ್ದಂತಾಯಿತು. ಪುಟ್ಟರಾಜ "ನಾನು ಸಮಾಜದ ಹಣದಲ್ಲಿ ವಿದ್ಯೆ ಪಡೆದೀನಿ, ಅದಕ್ಕೆ ಸಮಾಜದ ಋಣ ತೀರಿಸಬೇಕು" ನಾನು ನಿನ್ನ ಜೊತೆ ಬರುವುದಿಲ್ಲ. ನನಗೆ ಪಂಚಾಕ್ಷರಿಯವರೇ ಗುರುಗಳು ತಂದೆ-ತಾಯಿ ಎಂದು ತನ್ನ ನಿರ್ಧಾರವನ್ನು ತಿಳಿಸಿದನು. ತಾಯಿ ಮರುಮಾತ ನಾಡದೆ ಮಗನನ್ನು ಸಮಾಜ ಸೇವೆಗೆ ಅರ್ಪಿಸಿದರು. ಇದರಿಂದ ಸಂಗೀತ ಕ್ಷೇತ್ರಕ್ಕೆ ಮಹದುಪಕಾರವಾಯಿತು.

**ಶಿಕ್ಷಣ :** ಪಂಚಾಕ್ಷರಿ ಗವಾಯಿಗಳಿಗೆ ಸದಾ ತಮ್ಮ ಶಿಷ್ಯನ ಭವಿಷ್ಯದ ಬಗ್ಗೆಯೇ ಯೋಚಿಸುತ್ತಿದ್ದರು. ಶಿಷ್ಯನಿಗೆ ಒಳ್ಳೆಯ ಶಿಕ್ಷಣ ಕೊಡಿಸಲು ಎಲ್ಲ ವ್ಯವಸ್ಥೆ ಮಾಡಿಸಿದರು. ಕಣ್ಣಿಲ್ಲದವನಿಗೆ ಶಿಕ್ಷಣ ಕೊಡಿಸುವುದು ಅಷ್ಟು ಸುಲಭವಲ್ಲ, ಪುಟ್ಟರಾಜ ಸೂಕ್ಷ್ಮಮತಿಯಾದ್ದರಿಂದ ಗುರುಗಳು ಹೇಳಿ ಕೊಟ್ಟಿದ್ದನ್ನು ಗ್ರಹಿಸಿ ಒಪ್ಪಿಸುತ್ತಿದ್ದರು. ಕಂಪ್ಲಿ ಚಂದ್ರಶೇಖರ ಮತ್ತು ಪಗಡದಿನ್ನಿ ಹಿರೇಮಠ ಅವರಿಂದ ಛಂದಸ್ಸು ದರ್ಪಣ, ಬಾಗಲಕೋಟೆಯ ಕಲ್ಲಿನಾಥ

ಶಾಸ್ತ್ರಿಗಳಿಂದ ತರ್ಕಶಾಸ್ತ್ರ ಮತ್ತು ನ್ಯಾಯಶಾಸ್ತ್ರ, ಜೇರಟಗಿ ಸದಾಶಿವಶಾಸ್ತ್ರಿ ಮಳೇಮಠ ಅವರಿಂದ ವೇದಾಂತ ನ್ಯಾಯಶಾಸ್ತ್ರ, ಕೈವಲ್ಯ ಪದ್ಧತಿ, ಪಾರಮಾರ್ಥಗೀತೆ, ತಾಳಿಕೋಟೆ ಬಸಪ್ಪಯ್ಯ ಬೆಳಗಲಿಮಠ ಅವರಿಂದ ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿ, ಅನುಭಾವಸಾರ, ಧಾರವಾಡದ ವಿರೂಪಾಕ್ಷ ಶಾಸ್ತ್ರಿಗಳಿಂದ ಶಬ್ದಾನುಶಾಸನ, ರೋಣದ ಸಿದ್ಧರಾಮ ಶಾಸ್ತ್ರೀಗಳಿಂದ ಛಂದಸ್ಸು, ಶಿರೂರ ಶಿವಬಸಪ್ಪ ಗುರುಗಳಿಂದ ಕನ್ನಡ ವ್ಯಾಕರಣ, ಹಿರೂರಿನ ಶಾಸ್ತ್ರಿಗಳಿಂದ ಅಲಂಕಾರ ಶಾಸ್ತ್ರ, ಗದುಗಿನ ಆರ್.ಎಸ್. ದೇಶಪಾಂಡೆಯವರಿಂದ ಹಿಂದಿ ಭಾಷೆ, ಮೈಸೂರಿನ ವೆಂಕಟಪ್ಪ ಬಳ್ಳಾರಿ ಅವರಿಂದ ಬ್ರೈಲ್ ಲಿಪಿಯನ್ನು ಕಲಿತು 'ತ್ರಿಭಾಷಾ ಪಂಡಿತ'ರೆಂಬ ಗೌರವಕ್ಕೆ ಭಾಜನರಾದರು. ಪಂಚಾಕ್ಷರಿ ಗವಾಯಿಗಳಿಗೆ ತಮ್ಮ ಶಿಷ್ಯ ಸಾಧನಾ ಪಥದಲ್ಲಿ ಹೆಜ್ಜೆಯಿಡುತ್ತಿರುವುದನ್ನು ಕಂಡು ತಮ್ಮ ಶ್ರಮ ಸಾರ್ಥಕವಾಯಿತೆಂಬ ಭಾವನೆ ಅವರಲ್ಲಿ ಹರ್ಷಚಿತ್ತ ರನ್ನಾಗಿ ಮಾಡಿತ್ತು.

ಗುರುಗಳ ಆಶೀರ್ವಾದ ಫಲಿಸಿತು : ಪುಟ್ಟರಾಜ ಒಮ್ಮೆ ಹಾನಗಲ್ಲ ಕುಮಾರಸ್ವಾಮಿಯವರ ದರ್ಶನಭಾಗ್ಯ ಪಡೆಯಲು ಹೋದಾಗ ಕುಮಾರ ಶಿವಯೋಗಿಗಳು ಪುಟ್ಟರಾಜನ ಮಸ್ತಕದ ಮೇಲೆ ಶಿವಹಸ್ತವನ್ನಿಟ್ಟು ನೀನು ಮುಂದೆ ಲೋಕ ಪ್ರಸಿದ್ಧಿಯಾಗುತ್ತೀಯಾ, ಗುರುವಿಗೆ ತಕ್ಕ ಶಿಷ್ಯ ಎಂದು ಆಶೀರ್ವಾದಿಸಿದ್ದು ಸಾಕಾರವಾಯಿತು. ಹಲವಾರು ಸಲ ತಮ್ಮ ಜೊತೆಯಲ್ಲಿ ಪುಟ್ಟರಾಜನನ್ನು ಗಾಡಿಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಆಗ ಅವನ ಕಂಠ ಸಿರಿಯಿಂದ ಸುಮಧುರವಾದ ಹಾಡುಗಳನ್ನು ಹಾಡಿಸಿ ಕೇಳಿ ಸಂತೋಷಪಡುತ್ತಿದ್ದರು.

**ಸಂಗೀತ ಶಿಕ್ಷಣ :** ಪಂಚಾಕ್ಷರಿ ಗವಾಯಿಗಳು ತಮ್ಮ ನೆಚ್ಚಿನ ಶಿಷ್ಯನಿಗೆ ತಾವು ಕಲಿತ ವಿದ್ಯೆಯನ್ನೆಲ್ಲಾ ಧಾರೆ ಎರೆದು ಲೋಕವಂದಿತ ವ್ಯಕ್ತಿಯನ್ನಾಗಿ ರೂಪಿಸಿದರು. ಶಿಷ್ಯನು ಅಷ್ಟೇ, ಪೂಜ್ಯ ಭಾವನೆಯಿಂದ, ವಿನಮ್ರತೆಯಿಂದ ನಿಷ್ಠೆ, ಶ್ರದ್ಧೆಯಿಂದ ಗುರುಗಳು ಹೇಳಿಕೊಟ್ಟಿದ್ದನ್ನೆಲ್ಲಾ ಕರಗತ ಮಾಡಿಕೊಂಡರು. ಲಿಂಗಪೂಜೆ ವಿಧಾನ, ಹಾರ್ಮೋನಿಯಂ, ಉತ್ತರಾಧಿ ಸಂಗೀತ, ಗೋಕಾಕ ತುಕಾರಾಮ ಪಂಡಿತರಿಂದ ಸಾರಂಗಿವಾದನ, ಕಮತಗಿ ಗದಿಗಪ್ಪ ಗವಾಯಿಗಳಿಂದ ತಬಲಾ ವಾದನ, ಹರಪ್ಪನಹಳ್ಳಿ ಪಂಡಿತ ರಾಘವೇಂದ್ರರಿಂದ ವಾಯಲಿನ, ಮೈಸೂರು ಮಹಾರಾಜರ ಆಸ್ಥಾನಪಂಡಿತ ದೇವೇಂದ್ರಪ್ಪ ಸ್ವಾಮಿ ಅವರಿಂದ ವೀಣಾವಾದಾನ ವಿದ್ಯೆಯನ್ನು ಅಭ್ಯಾಸ ಮಾಡಿ, ಸಂಗೀತಸಾಗರ, ಸಂಗೀತ ಸಾಮ್ರಾಟ ಎಂದು ಪ್ರಸಿದ್ಧ ರಾದರು. ಕರ್ನಾಟಕವಲ್ಲದೆ ದೇಶ ವಿದೇಶಗಳಲ್ಲಿಯೂ ಸಂಗೀತ ಕಛೇರಿಗಳನ್ನು ನಡೆಸಿಕೊಟ್ಟು ಲಕ್ಷಾಂತರ ಅಭಿಮಾನಿಗಳ ಪ್ರೀತಿ, ಗೌರವಕ್ಕೆ ಪಾತ್ರರಾದರು.

**ಖಾದಿ ವಸ್ತ್ರಧಾರಿ :** ಒಮ್ಮೆ ಪುಟ್ಟರಾಜರು ಸೊಲ್ಲಾಪುರಕ್ಕೆ ಹೋದಾಗ ಮಲ್ಲಪ್ಪ ಧನಶೆಟ್ಟಿಯವರಿಂದ ಪ್ರಭಾವಿತರಾಗಿ ಖಾದಿ ಧರಿಸಲು ಇಚ್ಛಿಸಿ ಗುರುಗಳ ಅಪ್ಪಣೆ ಪಡೆದು ಖಾದಿ ಷರ್ಟ್, ಪಂಚೆ, ಶಲ್ಯ, ಪಟಗ ತೊಟ್ಟು ರಾಷ್ಟ್ರಪ್ರೇಮವನ್ನು ಮೆರೆದು ಆದರ್ಶವಾದರು. ಪ್ರತಿನಿತ್ಯ ತ್ರಿಕಾಲ ಶಿವಯೋಗಾನುಷ್ಠಾನಕ್ಕೆ ಖಾದಿ ಮಡಿಬಟ್ಟೆಗಳನ್ನು ಧರಿಸುತ್ತಿದ್ದರು.

**ಶ್ರೀ ವೀರೇಶ್ವರ ಪುಣ್ಯಾಶ್ರಮ :** ಅಂಧರು, ಅಸಹಾಯಕರು, ಬಡ ಮಕ್ಕಳ ಪಾಲಿಗೆ ಬೆಳಕಾಗಲಿ ಎಂಬ ಸದುದ್ಧೇಶದಿಂದ ಶ್ರೀ ಹಾನಗಲ್ ಶ್ರೀ ಕುಮಾರಸ್ವಾಮಿಗಳವರ ಒತ್ತಾಸೆ, ಆಶೀರ್ವಾದ ಹಾಗೂ ಪ್ರೇರಣೆಯಿಂದ ಪಂಡಿತ ಪಂಚಾಕ್ಷರಿ ಗವಾಯಿಗಳು ೧೯೪೨ರಲ್ಲಿ



ಗದುಗಿನಲ್ಲಿ ಶ್ರೀ ವೀರೇಶ್ವರ ಪುಣ್ಯಾಶ್ರಮವನ್ನು ಪ್ರಾರಂಭಿಸಿದರು. ಅದನ್ನು ಮುನ್ನಡೆಸಲು ಅವರು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ತಮ್ಮ ಬಹುತೇಕ ವೇಳೆಯನ್ನು ಆಶ್ರಮದ ಅಭಿವೃದ್ಧಿಗೆ ವಿನಿಯೋಗಿಸಿದರು. ಅವರ ಆಶಯದಂತೆ ಅದರ ಸಂಪೂರ್ಣ ಜವಾಬ್ದಾರಿಯನ್ನು ಪಂಡಿತ ಪುಟ್ಟರಾಜ ಗವಾಯಿಗಳವರು ವಹಿಸಿಕೊಂಡು ಅದರ ಸರ್ವತೋಮುಖ ಪ್ರಗತಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡರು. ಬಸ್ ನಿಲ್ದಾಣ, ರೈಲ್ವೆ ಸ್ಟೇಷನ್, ಮಾರುಕಟ್ಟೆ ಹೀಗೆ ಜನಸಂದಣಿ ಪ್ರದೇಶಗಳಲ್ಲಿ ಭಿಕ್ಷೆ ಬೇಡುತ್ತ ಅವರಿವರು ಕರುಣೆಯಿಂದ ನೀಡಿದನ್ನು ಪಡೆದು ಮನೆಯತ್ತಲೋ, ತಾವು ತಂಗುವ ತಾಣಗಳತ್ತಲೋ ತೆರಳುತ್ತಿದ್ದ ಅದೆಷ್ಟೋ ಮಂದಿ ಅಂಧರು ಪಂಡಿತ ಪುಟ್ಟರಾಜ ಗವಾಯಿಗಳ ಅಂತರ್‌ದೃಷ್ಟಿಗೆ ಗೋಚರಿಸಿ 'ಭಿಕ್ಷೆ' ಎಂಬ ಪರಾವಲಂಬನೆಯಿಂದ ಮುಕ್ತಿ ಪಡೆದು ಸ್ವಾವಲಂಬಿಗಳಾಗಿ ಸ್ವಾಭಿಮಾನದಿಂದ ಬದುಕನ್ನು ನಡೆಸುವಂತೆ ಮಾಡಿದ ಪವಾಡಪುರುಷರು.

ಶ್ರೀ ವಿರೇಶ್ವರ ಪುಣ್ಯಾಶ್ರಮದಲ್ಲಿ ಸಂಗೀತ ಕಲಿತ ಅಸಂಖ್ಯಾತ ಅಂಧರು ಸರ್ಕಾರಿ ಅನುದಾನಿತ ಶಾಲೆಗಳಲ್ಲಿ ಸಂಗೀತ ಶಿಕ್ಷಕರು ಖಾಸಗಿಯಾಗಿ ಸಂಗೀತ ಗುರುಗಳೂ ಆಗಿ ಸೇವೆ ಸಲ್ಲಿಸುತ್ತಾ ತಮ್ಮ ಭವಿಷ್ಯವನ್ನು ರೂಪಿಸಿಕೊಂಡಿದ್ದಾರೆ. ಅಲ್ಲದೇ ಅದೆಷ್ಟೋ ಜನ ಅಂಧ ಕಲಾವಿದರು ಸಂಗೀತವನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ಆತ್ಮಗೌರವದಿಂದ ಸಮಾಜದ ಮುಖ್ಯವಾಹಿನಿಯಲ್ಲಿ ಎಲ್ಲರಂತೆ ಜೀವನ ನಡೆಸುತ್ತಾ ಪುಣ್ಯಾಶ್ರಮಕ್ಕೆ ಕೀರ್ತಿ, ಗೌರವವನ್ನು ತಂದುಕೊಟ್ಟಿದ್ದಾರೆ.

ಸಮಾಜದ ಅವಕೃಪೆಗೆ, ನಿರ್ಲಕ್ಷಕ್ಕೆ ಒಳಗಾದ ಸಾವಿರಾರು ಜನ ಅಂಧರು, ಅನಾಥರಿಗೆ ದಾರಿದೀಪವಾಗಿದ್ದ ಪಂಡಿತ ಪುಟ್ಟರಾಜ ಗವಾಯಿಗಳು ಅಂಧರಾದರೂ ಸಂಗೀತ ಸರಸ್ವತಿಯ ವರಪುತ್ರರಾಗಿದ್ದರು. "ಸಂಗೀತಕ್ಕೆ ಎಲ್ಲವನ್ನು ಗೆಲ್ಲುವ ಶಕ್ತಿಯಿದೆ "ಎಂಬುದನ್ನು ಸ್ವತಃ ಅನುಭವಕ್ಕೆ ತಂದುಕೊಂಡಿದ್ದ ಪುಟ್ಟರಾಜರು "ದೃಷ್ಟಿ ಇಲ್ಲದವರು ಆ ತಾಯಿ ಸರಸ್ವತಿ ದೆಸೆಯಿಂದ ಸಮಾಜದಲ್ಲಿ ಎಲ್ಲರಂತೆ ಬದುಕಲಿ" ಎಂಬ ಪಂಚಾಕ್ಷರಿ ಗವಾಯಿಗಳವರ ಆಶಯ ಪಂಡಿತ ಪುಟ್ಟರಾಜ ಗವಾಯಿಗಳವರ ಮೂಲಕ ಸಾಕಾರಗೊಂಡಿತು.

ಪಂಡಿತ ಪುಟ್ಟರಾಜ ಗವಾಯಿಗಳು ಅರ್ಪಣಾಭಾವದಿಂದ ಸೇವೆ ಸಲ್ಲಿಸಿದುದರ ಫಲವಾಗಿ ಇಂದು ಈ ಸಂಸ್ಥೆ ಅಚ್ಚರಿಪಡಿಸುವಷ್ಟು ಹೆಮ್ಮರವಾಗಿ ಬೆಳೆದು ನಿಂತಿದೆ. ಇಡೀ ಭಾರತದಲ್ಲಿಯೇ ಒಂದು ವಿಶಿಷ್ಟವಾದ ಜಾತ್ಯಾತೀತ, ಆಧ್ಯಾತ್ಮಿಕ, ಸಂಗೀತ ಕೇಂದ್ರವಾಗಿದೆ. ಅಂಧರಿಗೆ, ಸಂಗೀತಾಸಕ್ತರಿಗೆ ಸಂಗೀತ ದಾಸೋಹ ಈ ಆಶ್ರಮದಲ್ಲಿ ನಿರಂತರವಾಗಿ ನಡೆದಿದೆ. ಆರ್ಥಿಕ ಕೊರತೆಯನ್ನು ನೀಗಿಸಲು ಸುಗ್ಗಿ ಕಾಲದಲ್ಲಿ ಹಳ್ಳಿ ಹಳ್ಳಿಗೆ ಹೋಗಿ ಭಿಕ್ಷೆ ಬೇಡಿ ಆಶ್ರಮ ವಾಸಿಗಳಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ಸಲಹಿದರು. ಭಕ್ತರು ಭಕ್ತಿಯಿಂದ ನಡೆಸುತ್ತಿದ್ದ ತುಲಾಭಾರದಿಂದ ಬಂದ ಹಣವನ್ನು ದಾಸೋಹಕ್ಕೆ ವಿನಿಯೋಗಿಸಿದರು. ಮೊದ ಮೊದಲು ತುಲಾಭಾರವನ್ನು ಒಲ್ಲೆನೆಂದರೂ ಅದರಿಂದ ಆಶ್ರಮಕ್ಕೆ ಅನುಕೂಲವಾಗುತ್ತದೆ ಎಂಬುದನ್ನು ಮನಗೊಂಡು ಒಪ್ಪಿಗೆ ನೀಡಿದರು. ಒಂದರ್ಥದಲ್ಲಿ ಇದರಿಂದ ಆಶ್ರಮದ ಕಷ್ಟಗಳು, ಸಮಸ್ಯೆಗಳು ಪರಿಹಾರವಾಗುವಂತಾಯಿತು. ಸುಮಾರು ೩೩೦೦ ಕ್ಕೂ ಹೆಚ್ಚು ತುಲಾಭಾರಗಳು ನಡೆದಿದ್ದು ಅದರಿಂದ ಬಂದ ಹಣವನ್ನು

ಪುಣ್ಯಾಶ್ರಮಕ್ಕೆ ಬಳಸಿದರು. ಕರ್ನಾಟಕದಲ್ಲಷ್ಟೇ ಅಲ್ಲ, ರಾಷ್ಟ್ರ ಮಟ್ಟದಲ್ಲಿಯೂ ಯಾವ ಪುಣ್ಯಪುರುಷರಿಗೂ ಆಗದಷ್ಟು ದಾಖಲೆಯ ತುಲಾಭಾರ ನಡೆಸಿ ಭಕ್ತಕೋಟಿ ಪುನೀತರಾದರು. ಇದೊಂದು ಚಾರಿತ್ರಿಕ ದಾಖಲೆಯಾಗಿದೆ. ಅಭಿಮಾನಿಗಳು, ಭಕ್ತರು ನೀಡುತ್ತಿರುವ ಸಹಕಾರ, ಉದಾರ ಸಹಾಯದಿಂದ ಬೆಳೆದಿರುವ ಈ ಪುಣ್ಯಾಶ್ರಮ ಸರ್ಕಾರದಿಂದ ಯಾವುದೇ ರೀತಿಯ ಸಹಾಯವನ್ನು ನಿರೀಕ್ಷಿಸಿಲ್ಲ. ಇಲ್ಲಿ ಉಚಿತ ಊಟ, ಆಶ್ರಯ ಪಡೆಯುತ್ತಿರುವ ಸಂಖ್ಯೆ ಸಾವಿರಕ್ಕೂ ಹೆಚ್ಚಿದೆ.

ಪಂಚಾಕ್ಷರಿ ಗವಾಯಿಗಳು ಜೂನ್ ೧೧, ೧೯೪೪ ರಂದು ಲಿಂಗದೊಳಗಾದರು. ಅಂದಿನಿಂದಲೇ ಪುಣ್ಯಾಶ್ರಮದ ಸಂಪೂರ್ಣ ಜವಾಬ್ದಾರಿ ಪಂಡಿತ ಪುಟ್ಟರಾಜ ಗವಾಯಿಗಳ ಮೇಲೆ ಬಿತ್ತು. ಆರಂಭದಲ್ಲಿ ಸಾಕಷ್ಟು ತೊಂದರೆಗಳನ್ನು ಅನುಭವಿಸಿ ಶಿಷ್ಯ ಸಂಪತ್ತನ್ನು ಬೆಳೆಸಿದರು. ಹಾನಗಲ್ ಕುಮಾರಸ್ವಾಮಿಯವರ ಆಶೀರ್ವಾದ, ನೈತಿಕ ಬೆಂಬಲ, ಪಂಡಿತ ಪಂಚಾಕ್ಷರಿ ಗವಾಯಿಗಳವರ ದೂರದೃಷ್ಟಿಯಿಂದ ಆರಂಭವಾದ ಶ್ರೀ ವೀರೇಶ್ವರ ಪುಣ್ಯಾಶ್ರಮ ಸಾರ್ಥಕತೆಯ ಹೆಜ್ಜೆಯನ್ನಿಡುತ್ತಿದೆ. ಸುಮಾರು ೧೪ ಶಾಲಾ ಕಾಲೇಜುಗಳನ್ನು ಹೊಂದಿರುವ ವೀರೇಶ್ವರ ಪುಣ್ಯಾಶ್ರಮದಲ್ಲಿ ನಿತ್ಯ ಸಂಗೀತದ ಕಲರವ ಕೇಳಿಬರುತ್ತದೆ. ಇಲ್ಲಿ ಮಾತಿಗಿಂತ ಸಂಗೀತದ ನಾದ ಪ್ರತಿಧ್ವನಿಸುತ್ತಿದೆ.

**ಸಾಹಿತ್ಯ ಕ್ಷೇತ್ರ :** ಪಂಡಿತ ಪುಟ್ಟರಾಜ ಗವಾಯಿಗಳು ಸಾಹಿತ್ಯ ಮತ್ತು ಸಂಗೀತ ಕ್ಷೇತ್ರಕ್ಕೆ ಅಪಾರವಾದ ಕೊಡುಗೆಯನ್ನು ನೀಡಿ ಈ ಎರಡೂ ಕ್ಷೇತ್ರಗಳನ್ನೂ ಶ್ರೀಮಂತಗೊಳಿಸಿದ್ದಾರೆ. ೨೪ ಪುರಾಣ ಕೃತಿಗಳನ್ನು, ೭ ಗದ್ಯ ಗ್ರಂಥಗಳನ್ನು, ೪ ಪದ್ಯ ಕೃತಿಗಳನ್ನು ಬ್ರೈಲ್ ಲಿಪಿಯಲ್ಲಿ ರಚಿಸಿದರು. ಸಂಸ್ಕೃತ ಭಾಷೆಯಲ್ಲಿಯೂ ೭ ಕೃತಿಗಳನ್ನು ರಚಿಸಿದರು. ಬಸವಣ್ಣನವರ ಜೀವನ ಸಾಧನೆಯನ್ನು ಹಿಂದಿ ಭಾಷೆಯಲ್ಲಿ ಪರಿಚಯಿಸಿದರು. 'ಬಸವ ಪುರಾಣ' ಗ್ರಂಥವನ್ನು ರಚಿಸಿದರು. ಈ ಮೂಲಕ ಗ್ರಂಥಕ್ಕಾಗಿ ರಾಷ್ಟ್ರಪತಿಗಳಾಗಿದ್ದ ಬಾಬು ರಾಜೇಂದ್ರ ಪ್ರಸಾದರಿಂದ ಪ್ರಶಸ್ತಿಯನ್ನು ಸ್ವೀಕರಿಸಿದರು. ಈ ಗ್ರಂಥದ ಮೂಲಕ ಬಸವಣ್ಣನವರ ಸಮಾಜೋ-ಧಾರ್ಮಿಕ ಚಳುವಳಿಯ ಉನ್ನತ ಮೌಲ್ಯಗಳನ್ನು, ಕಾಯಕ-ದಾಸೋಹ ಸಿದ್ಧಾಂತವನ್ನು ಅರ್ಥಮಾಡಿಕೊಂಡ ರಾಷ್ಟ್ರಪತಿಗಳು 'ಬಸವ ಪುರಾಣ'ವನ್ನು ತಲೆಯ ಮೇಲೆ ಇಟ್ಟುಕೊಳ್ಳುವುದರ ಮೂಲಕ ಬಸವಣ್ಣನವರ ಜೀವನ ಮೌಲ್ಯಗಳನ್ನು ಗೌರವಿಸಿದರು. ೭೦ ಕ್ಕೂ ಹೆಚ್ಚು ಆಧ್ಯಾತ್ಮಿಕ, ಸಾಮಾಜಿಕ ನಾಟಕಗಳನ್ನು ರಚಿಸಿ ಗ್ರಾಮೀಣ ಪ್ರದೇಶಗಳಲ್ಲಿ ಪ್ರದರ್ಶನ ಮಾಡಿಸಿದರು.

**ಪಂಡಿತ ಪಂಚಾಕ್ಷರಿ ನಾಟ್ಯ ಸಂಘ :** ಪಂಚಾಕ್ಷರಿ ಗವಾಯಿಗಳು ವೀರೇಶ್ವರ ಪುಣ್ಯಶ್ರಮವನ್ನು ನಡೆಸಲು ಮಾಡಿದ ಸಾಲವನ್ನು ತೀರಿಸಲು ನಾಟಕ ಕಂಪನಿಯನ್ನು ಪ್ರಾರಂಭಿಸಲು ಗುರುಗಳಿಂದ ಅನುಮತಿಯನ್ನು ಪಡೆದು 'ಹಾನಗಲ್ ಕುಮಾರೇಶ್ವರ ಕೃಪಾ ಪೋಷಿತ ಪಂಡಿತ ಪಂಚಾಕ್ಷರಿ ನಾಟ್ಯ ಸಂಘ' ಸ್ಥಾಪಿಸಿದರು. ಮೊದಲು ನರಗುಂದದಲ್ಲಿ 'ಸೊಲ್ಲಾಪುರ ಸಿದ್ಧರಾಮೇಶ್ವರ' ನಾಟಕ ಪ್ರದರ್ಶನ ನಡೆಸಿದರು. ಈ ನಾಟಕದಲ್ಲಿ ಎಲ್ಲ ಪಾತ್ರಗಳನ್ನು ಪುರುಷರೇ ಮಾಡುತ್ತಿದ್ದರು. ಈ ನಾಟಕವನ್ನು ಒಮ್ಮೆ ವೀಕ್ಷಿಸಿದ ವರನಟ, ನಟಸಾರ್ವಭೌಮ ಡಾ. ರಾಜಕುಮಾರ್ ಅವರು ನೋಡಿ ವಿಸ್ಮಿತರಾದರು. ತಮ್ಮ ಜೀವಿತದ



ಕೊನೆಯವರೆಗೂ ಪುಣ್ಯಾಶ್ರಮಕ್ಕೆ ಉದಾರವಾದ ನೆರವು ನೀಡುವುದರ ಮೂಲಕ ಭಕ್ತಿ, ಗೌರವವನ್ನು ಸಲ್ಲಿಸಿದರು. ಪುಟ್ಟರಾಜ ಗವಾಯಿಗಳು ರಾಜಕುಮಾರ್ ಅವರಿಗೆ ಲಿಂಗ ದೀಕ್ಷೆಯನ್ನು ನೀಡಿ ಆಶೀರ್ವದಿಸಿದರು.

ಪಂಡಿತ ಪಂಚಾಕ್ಷರಿ ಗವಾಯಿಗಳು ಹಾಗೂ ಪುಟ್ಟರಾಜ ಗವಾಯಿಗಳ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ಪುಣ್ಯಾಶ್ರಮದಲ್ಲಿ ಶಿಕ್ಷಣ ಪಡೆದ ಅಸಂಖ್ಯಾತ ಸಂಗೀತಗಾರರು, ಕೀರ್ತನೆಕಾರರು, ವಾದ್ಯಗಾರರು, ಸಂಗೀತ ಪದವೀಧರರು ನಾಡಿನ ಸಂಗೀತ ಕ್ಷೇತ್ರದಲ್ಲಿ ಅಮೂಲ್ಯ ಸೇವೆಯನ್ನು ಸಲ್ಲಿಸುತ್ತಾ, ಆಶ್ರಮದ ಕೀರ್ತಿ ಕಳಸವನ್ನು ಹಿಮಾಲಯದ ತುತ್ತ ತುದಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ.

**ಪ್ರಶಸ್ತಿಗಳು :** ಪಂಡಿತ ಪುಟ್ಟರಾಜ ಗವಾಯಿಗಳು ಸಂಗೀತ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಸರ್ಕಾರ, ಮಠ ಮಾನ್ಯಗಳು, ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವ, ಭಕ್ತಿಯನ್ನು ಸಲ್ಲಿಸಿವೆ. ಭಾರತ ಸರ್ಕಾರ ಕೊಡುವ ಅತ್ಯುನ್ನತ ನಾಗರಿಕ ಗೌರವ 'ಪದ್ಮಭೂಷಣ' ಪ್ರಶಸ್ತಿಯನ್ನು ನೀಡಿ ಧನ್ಯತೆಯನ್ನು ಪಡೆದಿದೆ. ಎಲ್ಲಾ ಪ್ರಶಸ್ತಿಗಳನ್ನು ವಿನೀತಭಾವದಿಂದ ಸ್ವೀಕರಿಸಿ ಗುರುಗಳ ಶ್ರೀಚರಣದಲ್ಲಿ ಅರ್ಪಿಸಿದ ಮಹಾನುಭಾವರು.

ಶ್ರೀ ಸಿದ್ಧಗಂಗಾ ಕ್ಷೇತ್ರ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಭಕ್ತಿ, ಗೌರವವನ್ನು ಹೊಂದಿದ್ದ ಪಂಡಿತ ಪುಟ್ಟರಾಜ ಗವಾಯಿಗಳು, ಶ್ರೀಮಠದಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಂಗೀತ ಸುಧೆಯನ್ನು ಹರಿಸುವುದರ ಮೂಲಕ ಭಕ್ತಿಯನ್ನು ಅರ್ಪಿಸಿದ್ದಾರೆ. ಅವರ ನಿಷ್ಕಾಮ ವಿಶಿಷ್ಟ ಸೇವೆಯನ್ನು ಮನಗೊಂಡು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸನ್ಮಾನಿಸಿ ಗೌರವಿಸಿ ಆಶೀರ್ವದಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸ ಬಯಸುತ್ತೇನೆ.

**ಲಿಂಗೈಕ್ಯ :** ತಮ್ಮ ಬದುಕನ್ನು ಸಮಾಜದ ಒಳಿತಿಗಾಗಿ ಅರ್ಪಿಸಿಕೊಂಡಿದ್ದ ಪಂಡಿತ ಪುಟ್ಟರಾಜ ಗವಾಯಿಗಳು ತ್ರಿಕಾಲ ಶಿವಪೂಜಾ ನಿಷ್ಠರಾಗಿದ್ದರು. ಸಾವಿರಾರು ಜನ ಅಂಧರು, ಅನಾಥರು, ಸಮಾಜದ ಮುಖ್ಯವಾಹಿನಿಯಲ್ಲಿ ಜೀವನ ನಡೆಸುವಂತೆ ಮಾಡಿದ ಮಹಾಸಂತರು, ಕರುಣಾ ಸಾಗರವಾಗಿದ್ದ ಪುಟ್ಟರಾಜ ಗವಾಯಿಗಳು ವಯೋಸಹಜವಾದ ಅನಾರೋಗ್ಯದಿಂದ ಬಳಲುತ್ತಿದ್ದರು. ಸೆಪ್ಟೆಂಬರ್ ೧೭, ೨೦೧೦ ರಂದು ಪ್ರಾಣಲಿಂಗ ಹಾಗೂ ಇಷ್ಟಲಿಂಗ ಪೂಜೆಯನ್ನು ಮುಗಿಸಿದ ಕೂಡಲೇ ಅವರ ದಿವ್ಯಾತ್ಮ ಲಿಂಗದಲ್ಲಿ ಲೀನವಾಯಿತು. ಲಕ್ಷಾಂತರ ಜನ ಅಂತಿಮ ಯಾತ್ರೆಯಲ್ಲಿ ಭಾಗವಹಿಸಿ ಅಂತಿಮ ದರ್ಶನ ಪಡೆದು ಭಕ್ತಿ, ಗೌರವವನ್ನು ಸಲ್ಲಿಸಿದರು. ಅವರು ಭೌತಿಕವಾಗಿ ನಮ್ಮ ಮುಂದೆ ಇಲ್ಲದೆ ಹೋದರೂ, ಸಾವಿರಾರು ಸಂಗೀತ ಕಲಾವಿದರಲ್ಲಿ ಅವರನ್ನು ಕಾಣುತ್ತಿದ್ದೇವೆ.

ನಿರ್ವಚನ ೩೧

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

*'ಅನಿಮಿಷ', ಕ್ರಾಸ್-7, ದುರ್ಗಿಗುಡಿ*
*ಹಂತ 1, ಹೊನ್ನಾಳಿ - 577 217*
*ದಾವಣಗೆರೆ ಜಿಲ್ಲೆ*
*98801 30203*

**ಕದಳಿ ಎಂಬುದು ತನು, ಕದಳಿ ಎಂಬುದು ಮನ,**
**ಕದಳಿ ಎಂಬುದು ವಿಷಯಂಗಳು.**
**ಕದಳಿ ಎಂಬುದು ಭವಘೋರಾರಣ್ಯ.**
**ಈ ಕದಳಿ ಎಂಬುದ ಗೆದ್ದು ತವೆ ಬದುಕಿ ಬಂದು**
**ಕದಳಿಯ ಬನದಲ್ಲಿ ಭವಹರನ ಕಂಡೆನು.**
**ಭವ ಗೆದ್ದು ಬಂದ ಮಗಳೆ ಎಂದು ಕರುಣದಿ ತೆಗೆದು ಬಿಗಿಯಪ್ಪಿದಡೆ**
**ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು.**

*(ಶಿವಶರಣೆಯರ ವಚನಸಂಪುಟ, ಸಂ:ಡಾ.ವೀರಣ್ಣರಾಜೂರ, ೧೯೯೩, ಸ.ವ.ಸಂ,ವ.೧೧೫,ಪು.೩೮)*

ಕದಳಿಬನ ಭೌಗೋಳಿಕವಾಗಿ ಆಂಧ್ರಪ್ರದೇಶದ ರಾಯಲಸೀಮೆ ಕರ್ನೂಲು ಜಿಲ್ಲೆ ಶ್ರೀಶೈಲಗಿರಿಯಲ್ಲಿ ನೈಸರ್ಗಿಕವಾಗಿ ಮೈದಳೆದ ಸಹಜ ಕಾನನ. ಪುರಾತನ ಕಾಲದ ಭಾರತದಲ್ಲಿ ಪ್ರತಿಷ್ಠಾಪಿತವಾದ ದ್ವಾದಶ ಜ್ಯೋತಿರ್ಲಿಂಗ ಕ್ಷೇತ್ರಗಳಲ್ಲಿ ಒಂದು ಶ್ರೀಶೈಲದ ಚೆನ್ನಮಲ್ಲಿಕಾರ್ಜುನ ದೇಗುಲ. ಅಕ್ಕಮಹಾದೇವಿಯ ಆರಾಧ್ಯ ದೈವ ನೆಲೆಸಿರುವ ಈ ಪವಿತ್ರತಮ ಸ್ಥಳದ ಸುತ್ತ ಹಬ್ಬಿರುವ ಅನುಭಾವ ಕಾನನವೆ ಅವಳು, ಅಲ್ಲಮ ತಲುಪಿದ ಅಂತಿಮ ಅಲೌಕಿಕ ಗಮ್ಯಸ್ಥಾನ. ಅನೇಕ ವಚನಕಾರ\ಕಾರ್ತಿಯರ ಕನಸಿನ ನಿಗೂಢ ನಿರ್ವಾಣ ರೂಪಕವೂ ಹೌದಿದು. ಭವಬಂಧನಕ್ಕೆ ಧ್ರುವೀಕೃತ ಶೂನ್ಯ ಸಿದ್ಧಿಗೆ ತೋರ್ಬೆರಳು ಈ ಕದಳಿ. ವಚನಸಾಹಿತ್ಯದ ಪ್ರತಿಮಾತ್ಮಕ ಪರಿಭಾಷೆಯಲ್ಲಿ ಉಭಯ ಸಂಕಟವಳಿದ ಆತ್ಮ ಪರಮಾತ್ಮನಲ್ಲಿ ಬೆರೆವ, ಭಕ್ತೆ\ಕ್ತ ಇಷ್ಟದೈವದೊಳಗಾಗುವ ಸುಖಾಂತ ತಾಣವಿದು.

ಸಂಸ್ಕೃತದ ಕದಳಿಯೆ ಕನ್ನಡದ ಬಾಳೆ. ಕದಳೀ ಫಲ ಸಿಕ್ಕಾಪಟ್ಟೆ ಸಿಹಿಯಾದ ಬಾಳೆಹಣ್ಣು. ಕದಳಿ ಬನ ಒಕ್ಕಲ ಬದುಕಿಗೆ ಇಂಬಾಗೊ ಬಾಳೆತೋಟ. ಅಷ್ಟೆ ಅಲ್ಲದೆ ಈ ಕದಳಿ ಕನಸು ಮನಸಲ್ಲಿ ಸದಾ ಕಾಡುವ ದೈಹಿಕ ಕಾಮನೆಯ ರೂಪಕ. ಜೊತೆಗೆ ಆಸೆಗಳ ಗೆದ್ದವರ ಆಧ್ಯಾತ್ಮಿಕ ಅನುಭಾವಿಕ ಸಂಕೇತ. ಶ್ರೀಶೈಲ ಶಿಖರ ವ್ಯಾಪಿ ಹಚ್ಚಹಸಿರ ಜಟಾಜೂಟದಂತೆ ಹಬ್ಬಿ ಸ್ಥೂಲ ಪರಿವೇಷವಾಗಿದ್ದ ಕದಳಿವನ ಅಕ್ಕ ಹೊಕ್ಕೊಡನೆ ಧ್ವನ್ಯಾತ್ಮಕ ಪರಿಕಲ್ಪನೆಯಾಗಿ



ಪರಿವರ್ತಿತವಾಗಿಬಿಟ್ಟಿತೆ? ಹೊರಗಷ್ಟೆ ಅಲ್ಲ ಒಳಗೂ ಇದೆ ಕದಳಿ ಎಂಬರಿವು ಏಕಾಏಕಿ ಸ್ಫೋಟಗೊಂಡಿತೆ? ಮೈಮನಗಳ ಸುಳಿಯಲ್ಲು ಕದಳಿ ಮನೆ ಮಾಡಿರುವ ಒಳಾತಂಕದ ಅನುಭವವಾಗಿ, ಈ ಉಭಯ ಸಂಕಟವಳಿದು ನಿರಾತಂಕ ನೆಲೆಗೇರುವ ಹಂಬಲ ಹೆಪ್ಪುಗಟ್ಟಿತೆ? ಅದೆಷ್ಟು ಬಗೆ ಕದಳಿವನದ ಪ್ರಸ್ತಾಪವಿದೆ ಈ ವಚನದಲ್ಲಿ? ಅದು ಹೊರ ಕದಳಿ? ಒಳ ಕದಳಿಯೆ? ಕಣ್ಣಾರೆ ಕಂಡ ಭೌತಿಕ ಕದಳಿ ಮತ್ತು ಕಾಣಲಾ\ಬಾರದ ಪಾರಭೌತಿಕ ಕದಳಿಯೆ? ದ್ವಂದ್ವಭಾವದ ಲೌಕಿಕ ಕದಳಿ ಮತ್ತು ಉಭಯ ಭಾವ ರಹಿತ ಭವಹರನ ಅಲೌಕಿಕ ಕದಳಿಯೆ? ಇದೇ ಇಲ್ಲಿನ ಜಿಜ್ಞಾಸೆ. ಮೊದಲ ನಾಲ್ಕು ಸಾಲುಗಳ ಭವ ಕದಳಿಯೆ ಬೇರೆ, ಐದನೆ ಸಾಲಲ್ಲಿ ತಲೆಯೆತ್ತೊ ನಿಜ ಕದಳಿಯ ಬನವೆ ಬೇರೆ ಎನ್ನಬಹುದೆ? ಅಥವ ಭವ ಕದಳಿ ವನದಲ್ಲೆ ಅಡಗಿರುವ ಭವಹರನಿರವು ಅರಿವಾದ ಕ್ಷಣ ಭೌತಿಕ ತಾಣವೆ ಪಾರಭೌತಿಕ ಬಯಲಾಗಿ ಬದಲಾಗಿ ಹೋದ ದರ್ಶನವಾಯಿತೆ? ಲೋಕದ ಹಂಗು, ತೊಗಲ ವಾಸನೆ ತೊಲಗಿದ ನಂತರವೆ ಕರುಣಾಕರನ ಅನುಭಾವಿಕ ಕದಳಿ ಲಭ್ಯ ತಾನೆ? ಆಗ ಭವಭಾರಿ ಕದಳಿ ನಡೂ ಮಧ್ಯದಲ್ಲೆ ಅವ ತಂದೆಯಾಗಿ ಕಂಗೊಳಿಸಿ ಭಕ್ತೆಯನ್ನೆ "ಭವಗೆದ್ದು ಬಂದ ಮಗಳೆ ಎಂದು\ ಕರುಣದಿ ತೆಗೆದು ಬಿಗಿಯಪ್ಪಿ" ಸಲಹೊ ಅಹೋಭಾಗ್ಯವೆ ಇದು? ಅನಂತ ಕರುಣಿ ಚೆನ್ನಮಲ್ಲಿಕಾರ್ಜು ನನಲ್ಲಿ "ಲಿಂಗೈಕ್ಯವಾದ ಬಳಿಕ ಏನೂ ಎನ್ನೆ" ಎಂದು ಅನಿರ್ವಚನೀಯ ಸುಖಕ್ಕೆ ದಕ್ಕಿ ಹೋದಳೆ ಅಕ್ಕ?

ಕದಳಿ ಶಬ್ದಕ್ಕೆ ಎಷ್ಟೆಲ್ಲ ವಿಭಿನ್ನ ವಿಚಿತ್ರಾರ್ಥ ನಿಖರವಾಗಿ ಹಚ್ಚಿ ತಿರು ತಿರುಗಿಸಿ ತೋರಿಸತ್ತಲ್ಲವೆ ಈ ದಾರ್ಶನಿಕ ವಚನ?! ಕದಳಿ ಪಂಚೇಂದ್ರಿಯ ಗ್ರಾಹ್ಯ(ಕಾಂಕ್ರೀಟ್) ತನುವೂ ಹೌದು, ಪಂಚೇಂದ್ರೀಯಾತೀತ (ಆ್ಯಬ್‌ಸ್ಟ್ರ್ಯಾಕ್ಟ್) ಮನವೂ ಹೌದು. ಈ ತನುಮನಗಳು ಹದವಾಗಿಯೊ\ಹದತಪ್ಪಿಯೊ ಸಂಗಮಿಸಿದ ಒಳವ್ಯಕ್ತಿತ್ವ ವಿಷಯಂಗಳು ಬೀಡು ಬಿಟ್ಟ ಕದಳಿಯಷ್ಟೆ ಅಲ್ಲ, ಸುಲಭ ಸಾಧ್ಯ ದಾಟಲಾಗದ ಹೊರಗಣ ಭವಘೋರಾರಣ್ಯ ಕೂಡ. ಒಳಗು ಹೊರಗೂ ಮೂರ್ಹೊತ್ತೂ ಕಾಡುತ್ತಲೆಯಿರೊ ಈ ಕದಳಿಯ ಬನವೆಂಬ ಭವಭಾರಿ ಬದುಕತವೆ (ಪೂರ್ತಿ) ಗೆದ್ದುಳಿದು ಇಷ್ಟದೈವದ ಮಡಿಲಿಗೆ ಮರಳಿ ಬರುವ ಛಲವಿರಬೇಕು ಶರಣೆ\ಣಂಗೆ. ಕಷ್ಟಕರ ಸಾಧನೆಯ ನಿರಂತರ ವ್ಯಕ್ತಿಗತ ಯತ್ನವೂ ಜಾರಿಯಲ್ಲಿರಬೇಕು, ಒಲಿದಿಷ್ಟ ದೈವದ ಕರುಳು ಕರಗಿ ಕೈಹಿಡಿದೆತ್ತೊ ಕರುಣ ಪ್ರಸಾದ ಯೋಗವೂ ಕೂಡಿ ಬರಬೇಕು. ಆಗಲೆ ಜೀವನ್ಮುಕ್ತಿ! ಅದೆ ಅನುಭಾವ ಸುಖ! ಅಸಲಿ ಶೂನ್ಯ ಸಂಪಾದನೆ!

ಕದಳಿ ಕೇವಲ ಚೆಲುವಿನ ಇತ್ಯಾತ್ಮಕ(ಪಾಸಿಟಿವ್) ಸಂಕೇತವಲ್ಲ, ಅದು ಕೆಡುಕಿನ ನೇತ್ಯಾತ್ಮಕ(ನೆಗೆಟಿವ್) ಪೀಡೆ ಕೂಡ ಎಂಬುದು ಈ ಅನುಭಾವ ಗರ್ಭಿತ ನಿಬ್ಬೆರಗು ವಚನದ ಹೊಚ್ಚ ಹೊಸ ನೋಟ. ಯಾವುದೆ ಖಂಡ ಸತ್ಯ\ ಅರ್ಧ ಸತ್ಯದ ಪಕ್ಷಪಾತಿಯಾಗದ, ಏಕಾರ್ಥಕ್ಕೆ ಜೋತುಬಿದ್ದ ಬರುಮಾತಿನ ಬಡಕಾವ್ಯವಾಗದ ವೇದೋಪನಿಷತ್ತು ಮತ್ತು ವಚನಗಳು ನಿಷ್ಪಕ್ಷಪಾತಿ ಅಖಂಡ ಸತ್ಯ ಎತ್ತಿಹಿಡಿಯಲು ಬಹ್ವರ್ಥದ ಭಾವ ಸಂದಿಗ್ಧ(equivocal) ಅಭಿವ್ಯಕ್ತಿಗೆಳಸುತ್ತವೆ. ಅಂಥ ಅಭಿವ್ಯಕ್ತಿ ದಡ್ಡ ಮನಸ್ಸಿಗೆ ಅನುಮಾನದ ಅಡ್ಡಗೋಡೆ ದೀಪವಾದರೆ, ಅರ್ಧ ಸತ್ಯಾರಾಧಕ ಅಪ್ರಬುದ್ಧರಿಗೆ ಸ್ವಹಿತಾಸಕ್ತಿ ಮತಾಂಧ ತತ್ವ ಬೆಂಬಲಿಸುವಂತೆ ಕಂಡೀತು. ಅದು ವ್ಯಾಖ್ಯಾನದ ಇತಿಮಿತಿಯೆ ಹೊರತು

ವೇದೋಪನಿಷತ್ತು ವಚನಗಳ ತಪ್ಪಲ್ಲವಷ್ಟೆ? ಈ ವಚನಕ್ಕು ಈ ಮಾತು ಅನ್ವಯಿಸತ್ತೆ. ಇಲ್ಲಿ ಕದಳಿ ಏಕಾರ್ಥವುಳ್ಳ ಶಬ್ದವಲ್ಲ. ಸಿಹಿ ಪ್ರೇಮಗಂಗೆ ಚಿಮ್ಮಿಸಿ ಸಲಹ ಬಲ್ಲ ಕದಳಿ, ಕಹಿ ಕಾಮ ಯಮುನೆಯಾಗಿ ಕಾಡಿ ಕಂಗೆಡಿಸಲೂ ಬಲ್ಲದು. ವಿಷಯಂಗಳ ಹಲುಬು ತಲುಬು ಮಾಯವಾದ ಬಳಿಕವಷ್ಟೆ ಗಂಡು-ಹೆಣ್ಣಿನ ಸಂಬಂಧ ಕಾಮ ವಿಕಾರ ಕಾಯ ವಿಕಾರ ಕಂಟಕ ದಾಟಬಲ್ಲದು. ಪ್ರೇಮಾಕರ್ಷಣೆ ಯಾವ ಮಾಯದಲ್ಲಿ ಕಾಮ ಲಾಲಸೆಯಾಗಿ ಕತ್ತಲ ಕೂಪಕ್ಕೆ ಕೆಡವಿ ಬಿಡತ್ತೆ ಹೇಳಬರದು. ಕರುಳಾಳ ಕರೆಗೆ ಓಗೊಡೊ ತಂದೆ-ಮಗಳ ಕರುಣಾ ಸಂಬಂಧವಷ್ಟೆ ಶಾಶ್ವತ, ಅದಷ್ಟೆ ಕೊನೆ ತನಕ ಉಳಿದಿರುತ್ತದೆಂಬುದು ಇಲ್ಲಿನ ಅನುಭಾವಿಕ ಒಳನೋಟ.

ದೇಹ ಸರ್ವಪಾಪಗಳ ಗೂಡು, ಅವಿನಾಶಿ ಆತ್ಮವಷ್ಟೆ ಪುಣ್ಯ ಚೇತನವೆಂಬ ವಿಭಜನಾ ಪ್ರಜ್ಞೆಗೆ ತಿದ್ದುಪಡಿ ತಂದು ದೇಹವನ್ನೆ ದೇಗುಲವನ್ನಾಗಿಸಿ ಕಾಯಕನಿಷ್ಠೆ ದಾಸೋಹ ಸಮರ್ಪಣೆ ಮೂಲಕ ದೇಹಾತ್ಮ ಪಾವಿತ್ರ್ಯ ಕಾಪಾಡಲಿಚ್ಛಿಸುವ ಶರಣ ಸಂಸ್ಕೃತಿ ತುರೀಯಾ ದರ್ಶದ ಮುನ್ಸೂಚನೆಯ ಮಿಸ್ಟಿಕಲ್ ಟ್ರ್ಯಾನ್ಸಿಷನ್ ವಚನವಿದು. ಅಳಿದು ಹೋಗಲಿರುವ ನಶ್ವರ ದೇಹದಲ್ಲಿದ್ದೇ ಶಾಶ್ವತ ಸುಖಕ್ಕೆ ಬಾಧ್ಯಸ್ತರಾಗೊ ರಹಸ್ಯಬಿಚ್ಚಿಡತ್ತೆ. ಭವಸಾಗರ ದಾಟಿಸಿ ಅನುಭಾವ ಶಿಖರಕ್ಕೇರಿಸುವ ಅಕ್ಕನ ಈ ವಚನ. ಸಾಧನಾಪಥದಲ್ಲಿಯಾವ ಹಂತದವರೆಗೆ ಕದಳಿ ಎಂಬುದು ಲೌಕಿಕ ಭೌತಿಕ ದೈಹಿಕ ಮಾನಸಿಕ ಉಪಾಧಿಯಾಗಿ ಅಡ್ಡಗಾಲ್ಹಾಕತ್ತೆಂದು ಸತರ್ಕ ತಿಳಿಯಪಡಿಸುತ್ತಲೆ, 'ಅದರ' ಮೂಲಕವೆ 'ಅದನ್ನ' ದಾಟಬಹುದಾದ ಗುಟ್ಟನ್ನೂ ಹೇಳಿಕೊಡತ್ತೆ. ಉಡುತಡಿಯಲ್ಲೆ ಉಟ್ಟುಡುಗೆ ಕಳಚಿ ಬಿಸುಟಿ ಹುಟ್ಟುಡುಗೆಯಲ್ಲಿ ಹೊರಟಕ್ಕ ತನ್ನನುಭಾವ ಚಾರಣದುದ್ದ ತಂಪು ಹಸಿರೆಸೆವ ನಿರಂಬಳ ನಡೆದಾಡುವ ನಗ್ನ ವೃಕ್ಷವಾಗಿ ಆಕಾಶ ಸೂರ್ಯ ಚಂದ್ರ ನಕ್ಷತ್ರ ಮೋಡ ನೀರು ಬೆಂಕಿ ಗಾಳಿ ಮಣ್ಣು ಗಿಡ ಮರ ಕಾಡು ಬೆಟ್ಟ ಪಶು ಪಕ್ಷಿ ಕ್ರಿಮಿ ಕೀಟ ಕೆರೆ ನದಿ ನದ ಸಮುದ್ರ ಮಹಾಸಾಗರ- ಸಕಲ ಚರಾಚರಗಳೆಲ್ಲವೂ ಅನಾದಿಯಿಂದ ನಂತದವರೆಗು ಪುಟ್ಟಪೂರ ಸಹಜ ಸುಂದರ ಸ್ವಸ್ಥ ನಗ್ನ ನಿಲುವಲ್ಲೆ ಬೆಳೆದುಳಿದು ಕಂಗೊಳಿಸುವ ಪಣತೊಟ್ಟ ಮಹಾಸತ್ಯ ಅನಾವರಣಗೊಳಿಸಿದಳೆ?! ಆ ಅಗಾಧ ಅರಿವಿನ 'ಬೆಳಗುಟ್ಟು ಲಜ್ಜೆಗೆಟ್ಟ'ಕ್ಕ 'ಮುಚ್ಚಿರ್ದ ಮುಸುಕಿರ್ದ ನಿರ್ವಾಣವ' ಜತನವಾಗಿಸುವ ಬಯಲ ಚೆಲುವಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಡಗಿ ತಾನೊಲಿದಂತೆ ಹಾಡಿಕೊಳ್ಳುತ್ತಿರುವಳೆ ಇಂದಿಗು?

'ನಾಣಮರೆಯ ನೂಲು ಸಡಿಲಲು\ ನಾಚುವರು ನೋಡಾಗಂಡು ಹೆಣ್ಣೆಂಬ ಜಾತಿಗಳು.\ ಪ್ರಾಣದೊಡೆಯ ಜಗದೊಳಗೆ ಮುಳುಗಲು ತೆರಹಿಲ್ಲದಿರಲು\ ದೇವರಮುಂದೆ ನಾಚಲೆಡೆಯುಂಟೆ?\ ಚೆನ್ನಮಲ್ಲಿಕಾರ್ಜುನ ಜಗವೆಲ್ಲಕಣ್ಣಾಗಿ ನೋಡುತ್ತಿರಲು\ ಮುಚ್ಚಿಮರಸುವ ಠಾವಾವುದು ಹೇಳಯ್ಯಾ?'(ಶಿವಶರಣೆಯರ ವಚನಸಂಪುಟ, ಸಂ:ಡಾ. ವೀರಣ್ಣ ರಾಜೂರ, ೧೯೯೩, ಸ.ವ.ಸಂ.ವ.೨೦೭, ಪು.೬೪) ಎಂಬಿನ್ನೊಂದು ವಚನದಲ್ಲಿ ಕಾಮವಿಕಾರ ಕೆರಳಿಸಲೆಂದೆ ಮೈಮುಚ್ಚಿಬಿಚ್ಚೊ ಹವ್ಯಾಸಕ್ಕೆ ಬಿದ್ದು ಭವಸಾಗರದಲ್ಲೀಸಿ ಬೇಸ್ತು ಬೀಳ್ವ ಎಡಬಿಡಂಗಿ ಸಂಸ್ಕೃತಿ, ಮಿಟುಕಲಾಡಿ ನಾಗರಿಕತೆಗೆ ಸವಾಲೆಸೆದಿರುವಳು ಅಕ್ಕ. ಮುಚ್ಚಿದ್ದ ಕಾಣದೆ ಬಿಚ್ಚಿದ್ದಷ್ಟೆ ಕಂಡು ನಾಚಿಕೆ ಮುಳ್ಳಾಗೊ ಮಣ್ಣಕಣ್ಣರ ಕಳ್ಳಪುಳಕ ಗೇಲಿಮಾಡುತ್ತಿರುವಳು.



ಸರ್ವವ್ಯಾಪಿ ಸರ್ವಶಕ್ತ ಪ್ರಾಣದೊಡೆಯನ ಪ್ರತ್ಯಕ್ಷ ಸಾಕ್ಷಿಯಲ್ಲಿ ಎಲ್ಲಿಯ ನಾಚಿಕೆ ಎಂದು ಘಟ್ಟಿಸಿಕೇಳುತ್ತಿರುವಳು. "ಪ್ರಕೃತಿಯ ಗುಣದಿಂದ ಕಟ್ಟುವಡೆದು ನಾನಾ ವಿಕೃತಿಗೊಳಗಾಗಿ ಭವದಲ್ಲಿ ಸುಖದುಃಖವುಂಬ" ಅಲ್ಪ ಜೀವಿಗಳ ತಮಾಶೆ ಮಾಡಿದ್ದಾಳೆ ಪ್ರಾಚೀನ ಸ್ತ್ರೀವಾದಿನಿಯಂತೆ ಗಂಡಸರ ಸಿದ್ಧಿ ಅಳೆವ ಲಕ್ಷ್ಮಿ, ಜಾನಪದೀಯ ತ್ರಿಪದಿಕಾವ್ಯ 'ಲಕ್ಷ್ಮಿಶೋಭಾನೆ'ಯಲ್ಲಿ (ವಾದಿರಾಜಸ್ವಾಮಿ, ವಿಜಯನಗರಕಾಲದ ವೈಷ್ಣವಕವಿ ತಂತ್ರಯೋಗಿ). ಇದ್ಯಾವುದರ ಅರಿವಿರದ ಅತಿಮುಕ್ತ ಆಧುನಿಕ ಜೀವಿಗಳು ಮಾನವೇತಿಹಾಸದಲ್ಲೆ ಮೊಟ್ಟ ಮೊದಲಬಾರಿಗೆ ಖುಲ್ಲಂಖುಲ್ಲಾ ಬೆತ್ತಲಾಗಿ, ಸಾಮಾಜಿಕ ಕಟ್ಟುಪಾಡು ಕಟ್ಟಳೆಗಳನ್ನೆಲ್ಲಾ ನುಂಗಿ ನೀರು ಕುಡಿದ ತಾವೆ ಮೂರೂ ಬಿಟ್ಟ ನಿಸ್ಸೀಮರೆಂದು ಬೀಗುತ್ತಿರುವರಷ್ಟೆ? ಈ ವಿಕಾರ ಬೆತ್ತಲೆ ಬದುಕು ನೋಡಿ ನಗುತ್ತಿರುವರೆ ಕಾಲವಾದರೂ ಕಾಲಾತೀತರಾಗಿರುವ ಹಿಂದಣೆಲ್ಲ ದ್ರಷ್ಟಾರರು ಯೋಗಿಗಳು ಅನುಭಾವಿಗಳು?

ಅಪರಿಮಿತ ಭೋಗ ಲಾಲಸೆಗೆ ವಿಪರೀತ ಯೋಗ ಆತ್ಯಂತಿಕ ತ್ಯಾಗದ ನಿರ್ವಾಣಿ ನಿಲುವೆ ತಕ್ಕ ಶಾಸ್ತಿಯೆ? ಮಿತಿ ಮೀರಿದ ಭಗ ರೋಗಕ್ಕೆ ನಗ್ನ ವೈರಾಗ್ಯ ತುರೀಯ ವಿರಕ್ತಿಯೆ ಮದ್ದೆ? ಅಂಥ ಮಹದರಿವಿನ ಮಹಾದೇವಿ ಮತ್ತು ಬಾಹುಬಲಿ ಪುರಾಣ-ಚರಿತ್ರೆ ಕೂಡು ಕಾಲದಲ್ಲಿ ಹೊಚ್ಚ ಹೊಸ ಬೆತ್ತಲೆ ಭಾಷ್ಯ ಸೃಷ್ಟಿಸಿಬಿಟ್ಟರೆ? ಮಹಾತ್ಯಾಗ ದೃಷ್ಟಾಂತ ಪ್ರತಿಮೆಯಾಗಿ ನಿಂತಿರುವನೆ ಬಾಹುಬಲಿ ನಮ್ಮ ಸ್ಮೃತಿಕೋಶದಲ್ಲಿ? ಕನ್ನಡಿಗರ ಹೃದಯ ಕದಳಿಬನ ಹೊಕ್ಕಿರೊ ಮಹಾದೇವಿಯಕ್ಕ ಅಪೂರ್ವ ಅನುಭಾವ ದ್ರವ್ಯ ಸುಗಂಧ ಸೂಸುತ್ತ ಬಯಲೊಡೆಯ ಶಾಶ್ವತ ಸ್ವಾಮಿಯೆಡೆ ಸಾಗುತ್ತಲೆಯಿರುವಳೆ?

●

ಉದರವ ತಾಗಿದ ಮಾತು
ಅಧರದಲ್ಲಿ ಬೀಸರವೋದೀತೆಂದು
ಅಧರವ ಮುಚ್ಚಿಕೊಂಡಿರ್ದಳವ್ವೆ
ಕಂಗಳ ಮುಚ್ಚಿಕೊಂಡಿರ್ದಳವ್ವೆ
ಪರಿಮಳ ಬೀಸರವೋದೀತೆಂದು
ಅಳಿಗೆ ಬುದ್ಧಿಯ ಹೇಳಿದಳವ್ವೆ
ಮನ ಬೀಸರವೋದೀತೆಂದು
ದಿನಕರನ ಕಾವಲಕೊಟ್ಟಳವ್ವೆ
ಇಂದು ನಮ್ಮ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ



# ಉಡಿಯ ಅಂಗವ ಬಿಟ್ಟು ಗುಡಿಯ ಅಂಗಕ್ಕೆ ಶರಣೆಂದವರಿಗೇನೆಂಬೆ?

**ವೆಂಕಟೇಶ ಕೆ. ಜನಾದ್ರಿ**

*ಲೆಕ್ಕಪತ್ರ ಅಧೀಕ್ಷಕ, ಕಕರಸಾ.ಸಂಸ್ಥೆ*
*ಕಲಬುರ್ಗಿ ವಿಭಾಗ-2, ಕಲಬುರ್ಗಿ-585102*
*ಮೊ: 9945330492*

ಬಹಿರಂಗದಲ್ಲಿ ಶುಚಿತ್ವ ಮಾಡುವವರು, ಮಾಡಿಕೊಳ್ಳುವವರು ಮತ್ತು ಮಾಡಿಸುವವರಿಗೇನು ಈ ನಾಡಿನಲ್ಲಿ ಕೊರತೆಯಿಲ್ಲ. ಆದರೆ ಅಂತರಂಗದ ಶುಚಿತ್ವ ಅಂತರಂಗದ ಶುದ್ದಿತನ ಮಾಡಿಕೊಳ್ಳುವುದಿರಲಿ ಪ್ರಯತ್ನಿಸುವವರೂ ಕಡಿಮೆಯೇ. ಅಂತರಂಗ ಶುದ್ದಿ ಮಾಡಿಕೊಳ್ಳುವುದು ಕಷ್ಟ. ಮಾಡಿಸುವವರಂತೂ ಇಲ್ಲವೇ ಇಲ್ಲ. ಹಾಗೆ ಮಾಡಿಸಲೂ ಸಾಧ್ಯವೂ ಇಲ್ಲ. ಬಾಹ್ಯದಲ್ಲಿ ಉಡುವ ತೊಡುವ ವಸ್ತ್ರಗಳ ಜೊತೆಗೆ ಭೌತಿಕವಾದ ಶರೀರದ ಶುಚಿತ್ವವೆಷ್ಟು ಮುಖ್ಯವೋ ಆಂತರ್ಯದ ಶುದ್ದತೆ ಮತ್ತು ಮನಸ್ಸಿನ ಸ್ವಚ್ಛತೆ ಕಾಪಾಡಿಕೊಂಡರೆ ಆತ ಶರಣನಾಗುತ್ತಾನೆ. ಮಹಾತ್ಮನಾಗ್ತಾನೆ. ಈ ಬಗೆಯ ಅಂತರಂಗ-ಬಹಿರಂಗದ ಶುದ್ಧತೆಯೇ ನಿಜವಾದ ಮಡಿತನವಾಗುತ್ತದೆ. ಮಡಿವಂತಿಕೆಯಾಗುತ್ತದೆ. ಅದು ಹಾಗಾಗಬೇಕು.

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನ ಸಮಕಾಲೀನ ಶರಣರಲ್ಲಿ ಮಡಿವಾಳ ಮಾಚಯ್ಯನವರದ್ದು ಶರಣರ ಬಟ್ಟೆಗಳನ್ನು ಶುಚಿ ಮಾಡಿಕೊಡುವ ಪವಿತ್ರವಾದ ಕಾಯಕ. ಇಲ್ಲಿ ಶರಣರೆಂದರೆ ಬಹಿರಂಗದೊಂದಿಗೆ ಅಂತರಂಗದಲ್ಲಿಯೂ ಶುದ್ದವಾಗಿರುವವರೆಂಬ ಅರ್ಥ. ಇಂಥ ಶರಣರು ಉಡುವ ಬಟ್ಟೆಗಳನ್ನು ಶುಚಿಗೊಳಿಸಿ ಅವರಿಗೊಪ್ಪಿಸಿ ಅವರ ಶುದ್ದ ಮನಸ್ಸಿನ ವಿಚಾರಗಳು ಇನ್ನಷ್ಟು ಅರಳುವಂತೆ ಮಾಡುವ ಮಾಚಯ್ಯ ತಂದೆ ನಿಜಕ್ಕೂ ಒಬ್ಬ ಅನುಭಾವಿ ಶರಣ. ಸಾಮಾನ್ಯರು ವಿಷಯವನ್ನು ಮತ್ತು ಅರಿವನ್ನು ಅನುಭವಿಸಬಹುದು. ಆದರೆ ಅನುಭಾವಿಕ ನೆಲೆಯಲ್ಲಿ ಕಂಡುಕೊಂಡವರು ಶರಣರು. ಅವರು ಬರೀ ಓದುವುದು, ಉಪದೇಶ ಮಾಡುವುದನ್ನು ಮಾಡದೇ ತಮ್ಮ ತಮ್ಮ ಕಾಯಕದೊಂದಿಗೆ ತಮ್ಮ ವಿವೇಚನೆಗೆ ಕಂಡುಕೊಂಡ ಅನುಭಾವಿಕ ನಿಲುವನ್ನು ವಚನಗಳ ಮೂಲಕ ಅನುಭವ ಮಂಟಪದಲ್ಲಿ ಮಂಥಿಸುತ್ತಿದ್ದರು. ಆ ಮಂಥನದಲ್ಲಿ ಆವೀರ್ಭವಿಸುವವು ಶುದ್ಧವಾದ ವಚನಗಳಾಗುತ್ತಿದ್ದವು. ಮುಂದೇ ಇವೇ ವಚನಧರ್ಮ, ಶರಣಧರ್ಮವಾದವು. ಇವುಗಳನ್ನು ನುಡಿದು ನಡೆದವರೇ ಶರಣರಾದರು. ಇಂಥವರ ತಾಣವೇ ಅನುಭವ, ಅನುಭಾವ ಮಂಟಪವಾದವು.

ಮೌಢ್ಯತೆ, ಜಾತೀಯತೆ, ಧರ್ಮಾಂಧತೆ, ಅಸಮಾನತೆಯಂಥ ಗಾಡಾಂಧಕಾರ ತುಂಬಿಕೊಂಡಿದ್ದ ಹನ್ನೆರಡನೆ ಶತಮಾನದಲ್ಲಿ ಬಸವಾದಿ ಪ್ರಮಥರ ವೈಚಾರಿಕ ಚಿಂತನೆಗಳು



ನಿಜಕ್ಕೂ ಅಂದು ಅವಶ್ಯಕವಾಗಿದ್ದವು. ಇಂಥ ಕಾಲಘಟ್ಟದಲ್ಲಿ ಉದಯಿಸಿದವರು ಮಡಿವಾಳ ಮಾಚಯ್ಯ ಶರಣರು. ಇಂದಿನ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ದೇವರ ಹಿಪ್ಪರಗಿಯಲ್ಲಿ ಪರವತಯ್ಯ ಮತ್ತು ಸುಜ್ಞಾನಮ್ಮ ಎಂಬ ಶರಣ ದಂಪತಿಗಳ ಮಗನಾಗಿ ಕ್ರಿ.ಶ. ೧೧೨೦-೩೦ರ ಕಾಲದಲ್ಲಿ ಜನಿಸುತ್ತಾರೆ. ಇವರು ಗುರುಗಳಾದ ಮಲ್ಲಿಕಾರ್ಜುನಯ್ಯ ಸ್ವಾಮಿಯವರ ಆಶೀರ್ವಚನ ಇವರನ್ನು ಬೆಳೆಸಿ ಬೆಳಗಿಸುತ್ತದೆ. ಇವರನ್ನು ಬಸವ ಕಲ್ಯಾಣದತ್ತ ಮುಖ ಮಾಡುವಂತೆಯೂ ಈ ಗುರುಗಳು ಪ್ರೇರಕರಾಗುತ್ತಾರೆ. ನಿಷ್ಠಾವಂತರ ಶರಣರ ಬಟ್ಟೆಗಳನ್ನು ಮಾತ್ರ ಶುಚಿಗೊಳಸುವುದು ಇವರ ಕಾಯಕ. "ಅರಸುತನ ಮೇಲಲ್ಲ, ಅಗಸುತನ ಕೀಳಲ್ಲ" ಎಂಬುದು ಇವರ ಸಮಾನತೆಯ ಮಂತ್ರ. ಕಾಯಕದ ಮಹತ್ವವಾಗಿತ್ತು.

ಅನುಭವ ಮಂಟಪಕ್ಕೆ ಬರುವ ಶರಣರನ್ನು ಸ್ವಾಗತಿಸಿ, ಹೊಸಬರಾಗಿದ್ದರೆ ಪರೀಕ್ಷಿಸಿ ಪ್ರವೇಶ ಪತ್ರ ನೀಡುವಂಥದ್ದು ಸಹ ಇವರ ಹೊಣೆಯಾಗಿತ್ತು. ಗಣಾಚಾರಿ ಸಂಪನ್ನರಿವರು. ಭವಿಯಾದ ಬಿಜ್ಜಳ ಮಹಾರಾಜನ ಬಟ್ಟೆಯನ್ನೂ ಸಹ ಶುಚಿಗೊಳಿಸಿ ಮಡಿ ಮಾಡಲು ಅಧಿಕಾರಯುತವಾಗಿ ದಿಟ್ಟತನದಿಂದ ನಿರಾಕರಿಸಿದ ಗಣಾಚಾರಿ. ಅಂದಿನ ವ್ಯವಸ್ಥೆಯಲ್ಲಿ ಇದೊಂದು ಮಹತ್ವವಾದ ಪ್ರತಿಭಟನೆಯಾಗಿತ್ತು. ಇಂದಿಗೂ ಅವ್ಯವಸ್ಥೆಯ ವಿರುದ್ಧ ಮುಷ್ಕರ ಮಾಡಲು ಹೆದರುವ, ಯೋಚಿಸುವ ಕೆಲವರಿಗೆ ಇವರ ಧೀರತನ ಮಾದರಿಯಾಗಬೇಕು. ಮಾಚಯ್ಯನವರ ಈ ಧೋರಣೆಗೆ ಕಾರಣ ಎಲ್ಲರೂ ಸತ್ಯ ಶುದ್ಧವಾದ ಕಾಯಕದಿಂದ ಶರಣತನದ ವ್ಯಕ್ತಿತ್ವದಿಂದ ಬದುಕಬೇಕು. ಇಡೀ ವ್ಯವಸ್ಥೆಯ ಶರಣಮಯವಾಗಬೇಕೆಂಬ ಹಸಿವು, ತವಕ ಇತ್ತು. ಪರಿಶುದ್ಧವಾದ ಕಾಯಕವೇ ಎಲ್ಲರೊಡಲ ಹಸಿವಾಗಿರಬೇಕೆಂಬ ಧೋರಣೆಯಲ್ಲಿ ಅವರು ಹಲವಾರು ವಚನಗಳನ್ನು ರಚಿಸಿದ್ದರು. ಇವರು "ಕಲಿದೇವರ ದೇವ" ಎಂಬ ಅಂಕಿತದಲ್ಲಿ ರಚಿಸಿರುವ ೩೪೩ ವಚನಗಳು ಇಂದು ದೊರೆತಿವೆ. ಅಧ್ಯಯನಕ್ಕೆ ಲಭ್ಯವಿವೆ.

ಮಾಚಯ್ಯನವರು ಬಸವಕಲ್ಯಾಣಕ್ಕೆ ಬರುವಾಗ ಭೀಮಾ ನದಿಯನ್ನು ದಾಟಿಕೊಂಡು ಬರಬೇಕಾಗುತ್ತದೆ. ಆ ಸಂದರ್ಭದಲ್ಲಿ ನದಿಯೇ ಎರಡು ಭಾಗವಾಗಿ ಇವರಿಗೆ ದಾರಿ ಮಾಡಿಕೊಡುತ್ತದೆಂಬ ಪ್ರತೀತಿ ಇದೆ. ಇದನ್ನು ನಂಬುವುದು ಅಸಾಧ್ಯ. ಆದರೆ ಒಳ್ಳೆಯ ಈಜುಗಾರರಾದ ಇವರು ಈಜಿಕೊಂಡೇ ನದಿಯನ್ನು ದಾಟಿರಬಹುದು. ಸರಾಗವಾಗಿ ಈಜುವಾಗ ನೀರು ಎರಡು ಭಾಗವಾದಂತೆ ಭಾಸವಾಗಿರುತ್ತದೆ. ಅಲ್ಲದೇ ಸಕಲ ಕೊಳೆಯನ್ನು ತೊಳೆಯುವ ಶಕ್ತಿ ನದಿ ನೀರಿಗೆ ಇರುತ್ತದೆ ಎನ್ನುತ್ತಾರೆ. ಇಲ್ಲಿ ಮಾಚಯ್ಯನವರಲ್ಲಿ ಯಾವುದೇ ಕೊಳೆ ಇಲ್ಲದ ಕಾರಣ ಆ ನದಿಯ ನೀರೂ ಇವರನ್ನು ಸೋಂಕಲು ಅವಶ್ಯವಿಲ್ಲವೆಂದು ಯೋಚಿಸಿರಬಹುದೇನೋ? ಭೌತಿಕವಾಗಿ ಮಾನಸಿಕವಾಗಿ ಶುದ್ಧವಾಗಿರುವವರಿಗೆ ಮತ್ತಾವ ಶುದ್ಧತೆಯ ಅವಶ್ಯಕತೆ ಇಲ್ಲವೆನ್ನುವುದರ ಪ್ರತೀಕವಾಗಿ ಹರಿಯುವ ನದಿಯೇ ಎರಡು ಭಾಗವಾಗಿ ಇವರಿಗೆ ದಾರಿ ಮಾಡಿದೆಯೆಂದು ಪರಿಭಾವಿಸಬಹುದು. "ಶುದ್ಧಿಯಿಂದ ಇದ್ದವರು ಇನ್ನೊಬ್ಬರನ್ನು ಶುದ್ಧ ಮಾಡುವುದು ಬಹಳ ಸುಲಭ. ಅಶುದ್ಧವಾದವರು ಇನ್ನೊಬ್ಬರನ್ನು ಶುದ್ಧಿಗೊಳಿಸಲು ತೊಡಗಿದರೆ ಆ ಇನ್ನೊಬ್ಬರೂ ಮತ್ತಷ್ಟು ಅಶುದ್ಧರಾಗುತ್ತಾರೆ". ಅದಕ್ಕಾಗಿಯೇ ಶರಣರು ಮೊದಲು ತಾವು ಶುದ್ಧರಾಗಿ ನಡೆದು ಇನ್ನೊಬ್ಬರಿಗೆ ಹೇಗೆ ಶುದ್ಧವಾಗಿ

ನಡೆಯಬೇಕೆಂದು ನುಡಿದು ದಾರಿ ತೋರಿಸುತ್ತಿದ್ದರು. "ಮೊದಲು ನೀನು ಶುದ್ಧನಾಗು ಜಗತ್ತಿನಲ್ಲಿ ಒಬ್ಬ ಅಶುದ್ಧಿ ಕಡಿಮೆಯಾಗುತ್ತಾನೆ" ಎಂಬುದವರ ನಿಲುವು.

ಮಾಚಯ್ಯನವರು ಬಸವಕಲ್ಯಾಣದಲ್ಲಿ ಕಾಯಕ ನಿರತರಾದ ಸಂದರ್ಭದಲ್ಲಿ ಒಂದು ದಿನ ಶರಣ ನುಲಿಯ ಚಂದಯ್ಯನವರ ಇಷ್ಟಲಿಂಗ ಕಳಚಿ ಬೀಳುತ್ತದೆ. ಆ ಇಷ್ಟಲಿಂಗವನ್ನು ಮತ್ತೇ ಪಡೆಯಲು ಚೆಂದಯ್ಯ ನಿರಾಕರಿಸುತ್ತಾರೆ. ಇಷ್ಟಲಿಂಗ ತಾನಾಗಿಯೇ ಕೆಳಗೆ ಬಿದ್ದಿದೆ ಅದನ್ನು ತೆಗೆದುಕೊಳ್ಳುವ ಅವಶ್ಯಕತೆ ನನಗೆ ಇಲ್ಲವೆನ್ನುತ್ತಾರೆ. ಹಾಗೆಂದು ಮತ್ತೇ ತಾವು ಕಾಯಕನಿರತರಾಗುತ್ತಾರೆ. ಅವರಿಗೆ ಇಷ್ಟಲಿಂಗಕ್ಕಿಂತ ಕಾಯಕ ಮುಖ್ಯವಾಗುತ್ತದೆ. ಆಗ ಇಷ್ಟಲಿಂಗ ಇವರ ಬೆನ್ನತ್ತಿ ಬರುತ್ತದೆ. ಅದಕ್ಕೆ ಕಾಯಕ ಮಾಡಲು ಇವರು ತಿಳಿಸುವುದು, ಈ ಎಲ್ಲಾ ಪ್ರಸಂಗ ಬಹುಶಃ ತಮಗೆಲ್ಲಾ ತಿಳಿದಿದೆ. ಈ ಇಷ್ಟಲಿಂಗ ನಿರಾಕರಣೆಯ ಸಂದರ್ಭ ಅನುಭವ ಮಂಟಪದಲ್ಲಿ ಚರ್ಚೆಯಾಗುತ್ತದೆ. ನಿರಾಕಾರ ಲಿಂಗವನ್ನನುಭವಿಸಿದ ನನಗೆ ಸಾಕಾರ ಲಿಂಗದ ಅವಶ್ಯಕತೆ ಇಲ್ಲವೆಂದು ಚೆಂದಯ್ಯ ವಾದಿಸಿದಾಗ ಮಾಚಯ್ಯನವರು ಬಹಳ ಮಾರ್ಮಿಕವಾಗಿ "ಸವಿ ಬೇಕು, ಹಣ್ಣು ಬೇಡ" ಎಂದರೆ ಹೇಗೆ?" ಚೆಂದಯ್ಯ. ನೀನು ಹಣ್ಣಿನ ಸವಿಯನ್ನು ಸವಿಯಬೇಕಾದರೆ ಹಣ್ಣನ್ನು ಸ್ವೀಕರಿಸಿ ಅದನ್ನು ತಿಂದು ಅನುಭವಿಸಿದಾಗ ಮಾತ್ರ ಸಾಧ್ಯವಲ್ಲವೇ? ಎಂದು ಪ್ರಶ್ನಿಸುತ್ತಾರೆ. ಇಲ್ಲಿ ಹಣ್ಣು ಸಾಕಾರ ರೂಪವಾದ ಇಷ್ಟಲಿಂಗವಾದರೆ ಅದರ ಸವಿ ನಿರಾಕಾರವಾದ ಒಳಗಿನ ಅರಿವು, ದೇವರನ್ನು ಅಂದರೆ ಲಿಂಗಭಾವವನ್ನನುಭವಿಸುವುದರ ಪ್ರತೀಕವಾಗಿದೆ. ಹೀಗೆ ಅಂಗದೊಳಗಿನ ಲಿಂಗತತ್ವ ಅರಿಯಲು ಇಷ್ಟಲಿಂಗವೆಂಬುದು ಹಣ್ಣು, ಒಳಗಿನ ಅರಿವು, ಜೀವಾತ್ಮ, ದೇವ, ಲಿಂಗತತ್ವವೆಲ್ಲ ಆ ಹಣ್ಣಿನ ಸವಿ ಇದ್ದಂತೆ. ಇಷ್ಟ ಲಿಂಗದ ಮಹತ್ವವನ್ನು ನಿರೂಪಿಸಿದವರು. ಇಷ್ಟಲಿಂಗ ಬೇಡ ಭಾವಲಿಂಗವೇ ಸಾಕು ಎಂಬುದು ನಿನ್ನ ಭ್ರಮೆಯಾಗಿದೆ, ನಿರಾಕರಾರವಾದ ದೇವರನ್ನು ಅನುಭಾವಿಸಲು ಸಾಕಾರವಾದ ಇಷ್ಟಲಿಂಗವೆಂಬ ಕುರುಹು ಅವಶ್ಯವೆನ್ನುತ್ತಾರೆ. ಹೀಗೆ ಮಾಚಯ್ಯನವರು ಪ್ರತಿಪಾದಿಸಿದ ಇಷ್ಟಲಿಂಗದ ಅವಶ್ಯಕತೆಯ ಕುರಿತ ಈ ಪ್ರಸಂಗ ಬಹಳ ಮಹತ್ವವನ್ನು ಪಡೆದುಕೊಳ್ಳುತ್ತದೆ.

"ಮಧುರ ಗುಣವ ಇರುವೆ ಬಲ್ಲದು, ವಾಯುಗುಣವ ಸರ್ಪ ಬಲ್ಲದು, ಗೋತ್ರದ ಗುಣವ ಕಾಗೆ ಬಲ್ಲದು, ಇದು ಕಾರಣ ಮನುಷ್ಯ ಜನ್ಮದಲ್ಲಿ ಬಂದು ಶಿವಜ್ಞಾನವನರಿಯದಿರ್ದಡೆ ಆ ಕಾಗೆ-ಗೂಳಿಗಳಿಗಿಂತ ಕರಕಷ್ಟ ಕಾಣಾ ಕಲಿದೇವರದೇವ" ಎಂಬ ಮತ್ತೊಂದು ವಚನದ ಮೂಲಕ ನಮ್ಮೊಳಗಿನ ಶಿವಜ್ಞಾನದ ಅರಿವನ್ನು ಪಡೆಯುವುದು ಇಷ್ಟಲಿಂಗ ಧರಿಸಿಕೊಂಡಿರುವವರ ಹೊಣೆಗಾರಿಕೆಯಾಗಿದೆ ಎನ್ನುತ್ತಾರೆ. ಹಾಗಾಗದಿದ್ದರೆ ಸಿಹಿ ಗುಣವನ್ನು ತಿಳಿದುಕೊಂಡ ಇರುವೆಗಿಂತ, ಗಾಳಿಯ ಗುಣವನ್ನರಿತ ಹಾವಿಗಿಂತ, ಗೋತ್ರದ ಗುಣದ ಅರಿವಿರುವ ಕಾಗೆ ಪಶು ಪಕ್ಷಿಗಳಿಗಿಂತ ಮನುಷ್ಯ ಕಡೆಯಾಗುತ್ತಾನೆ ಎಂದು ಛೇಡಿಸುತ್ತಾರೆ. ಏಕೆಂದರೆ ಜೀವ, ಜೀವಾತ್ಮ, ಪರಮಾತ್ಮ, ದೇವ, ದೇವರುಗಳೆಂಬ ಶಿವಜ್ಞಾನದ ಅರಿವಿರುವ ಮನುಷ್ಯನೇ ಈ ಅರಿವನ್ನು ಅರಿಯದಿದ್ದರೆ ಪಶು-ಪಕ್ಷಿಗಿಂತಲೂ ಆತ ಕೀಳು ಎಂಬುದು ಮಾಚಯ್ಯನವರ ಮನದಾತಂಕ.

"ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ, ಎತ್ತಿ ನೋಡಿದಡೆ ಲಿಂಗವೆಂಬ



ಗೊಂಚಲು, ಒತ್ತಿ ಹಿಂಡಿದರೆ ಭಕ್ತಿಯೆಂಬ ರಸವಯ್ಯ..... ಬಸವಾ ಬಸವಾ ಎಂದು ಮಜ್ಜನಕ್ಕೆರೆಯದವನ ಭಕ್ತಿ ಶೂನ್ಯ ಕಾಣಾ ಕಲಿದೇವರದೇವ" ಎಂದು ಬಸವಣ್ಣನವರ ಕುರಿತಾಗಿಯೇ ರಚಿಸಿದ ಈ ವಚನದಲ್ಲಿ ಬಸವಣ್ಣನವರ ಶರಣ ಸಂಕುಲದ ಮಹತ್ವದ ಕುರಿತು ಬಿಂಬಿಸಿದ್ದಾರೆ. ಬಸವನೆಂಬುದೇ ಬಳ್ಳಿಯಾಗಿ ಆ ಬಳ್ಳಿಯನ್ನು ಎತ್ತಿ ನೋಡಿದರೆ ಅಲ್ಲೆಲ್ಲ ಲಿಂಗಗಳಿರುವ ಗೊಂಚಲು, ಅವನ್ನು ಒತ್ತಿ ಹಿಡಿದರೆ ಭಕ್ತಿಯೆಂಬ ರಸ...ಇಂಥ ಲಿಂಗಕ್ಕೆ ಬಸವಾ ಬಸವಾ ಎಂದು ಮಜ್ಜನಕ್ಕೆರೆಯದವರಲ್ಲಿ ಭಕ್ತಿಯೇ ಇರಲಾರದು ಎಂಬ ಸಂಕಟ ಒಂದೆಡೆಯಾದರೆ ಇಷ್ಟು ಸರಳವಾಗಿ ದೇವನನ್ನನುಭವಿಸುವುದನ್ನು ಪಾಲಿಸಬೇಕೆಂಬ ಹಂಬಲ ಮತ್ತು ಹಸಿವು ಇಲ್ಲಿ ಕಾಣಬಹುದು. ಇದೆಂಥ ಅದ್ಭುತವಾದ ಭಕ್ತಿಯ ಪರಿಕಲ್ಪನೆಯಲ್ಲವೇ? ಹೀಗೆ ಮಾಚಯ್ಯನವರು ಬಹಳ ಗಂಭೀರವಾದ ಮತ್ತು ಆಕ್ರೋಶಭರಿತವಾದ ವಚನಗಳ ಜೊತೆಗೆ ಈ ಬಗೆಯ ಬೆಡಗಿನ ವಚನಗಳ ಮೂಲಕ ಭಕ್ತಿಯಲ್ಲಿ ದೇವನ ಕಾಣುವ ಬಗೆಯನ್ನು ಬಿಂಬಿಸಿದ್ದು ಇಲ್ಲಿ ಕಾಣಬಹುದು.

"ಉಡಿಯ ಲಿಂಗವ ಬಿಟ್ಟು, ಗುಡಿಯ ಲಿಂಗಕ್ಕೆ ಶರಣೆಂಬ, ಮತಿಭ್ರಷ್ಟರನೆಂಬೆನಯ್ಯ ಕಲಿದೇವರದೇವ" ಎಂದು ವಾಚಿಸುವಲ್ಲಿ ಇಷ್ಟಲಿಂಗದ ಅರಿವಿಲ್ಲದವರು ಬೆಟ್ಟದ/ಗುಡಿಯ ಲಿಂಗಕ್ಕೆರಗುವುದು ಸಹಜ. ಆದರೆ ಇಷ್ಟಲಿಂಗಧಾರಿಯಾಗಿದ್ದು ಇಷ್ಟಲಿಂಗದ ಮಹತ್ವವನ್ನರಿತುಕೊಂಡವರೂ ಸಹ ಗುಡಿಯ ಲಿಂಗಕ್ಕೆ ಮತ್ತು ಬೆಟ್ಟದ ಲಿಂಗಕ್ಕೆ ಮತ್ತೇ ಮತ್ತೇ ಶರಣೆಂದು ನಮಿಸುವವರಿಗೆ ಮತಿಭ್ರಷ್ಟರೆಂದು ಕೋಪದಿಂದ ಜರಿಯುತ್ತಾರೆ. ತನ್ನ ಇಷ್ಟಲಿಂಗದೊಳಗೆ ಅವಿತಿರುವ ಮಹಾದೇವನನ್ನು ಸುಲಭವಾಗಿ ಅರಿಯುವ ಬದಲು ಮತ್ತೇಕೆ ಈ ಜನ ದೇವನನ್ನು ಹೊರಗಡೆ ಹುಡುಕುತ್ತಾರೆಂಬ ಆತಂಕ, ಸಂಕಟ ಇಲ್ಲಿ ಮಾಚಯ್ಯನನ್ನು ಕಾಡುತ್ತದೆ. ಶುದ್ಧವಾದ ಮಡಿಮಾಡಿದ ಬಟ್ಟೆಗಳು ಮತ್ತು ಶರೀರ ಭೌತಿಕವಾಗಿ ಶುದ್ಧಗೊಳಿಸಿದರೆ ಇಷ್ಟಲಿಂಗವೆಂಬುದು ಭೌತಿಕ ಅಂಗದ ಜೊತೆ ಅಂಗದೊಳಗಿನ ಲಿಂಗವನ್ನು ಮಡಿಮಾಡುವ ಶಕ್ತಿ ಇದೆಯೆಂಬುದು ಮಾಚಯ್ಯನ ಭರವಸೆ. ಪ್ರತಿಯೊಬ್ಬರೂ ತಮ್ಮಂಗದೊಳಗೇ ದೇವನೆಂಬ ಇಷ್ಟಲಿಂಗದ ನಿರಾಕಾರ ಶಿವನನ್ನು ಕಾಣಬೇಕೆಂಬುದು ಅವರ ಒಡಲಾಶಯ.

ಇಂಥ ಮಾಚಯ್ಯನವರು ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಬಸವಣ್ಣನ ವ್ಯಕ್ತಿತ್ವದ ಕುರಿತು ಒಂದು ವಿಶಿಷ್ಟವಾದ ವಚನ ಅನುಭಾವಿಸಿದ್ದಾರೆ, ಅದು ಹೀಗಿದೆ.

**ಉಟ್ಟ ಸೀರೆಯ ಹರಿದು ಹೋದಾತ ನೀನಲಾ ಬಸವಣ್ಣ,**
**ಮೆಟ್ಟಿದ ಕೆರಹ ಕಳೆದು ಹೋದಾತ ನೀನಲಾ ಬಸವಣ್ಣ,**
**ಕಟ್ಟಿದ ಮುಡಿ ಬಿಟ್ಟು ಹೋದಾತ ನೀನಲಾ ಬಸವಣ್ಣ,**
**ಸೀಮೆಯ ಸಂಬಂಧವ ತಪ್ಪಿಸಿ ಹೋದಾತ ನೀನಲಾ ಬಸವಣ್ಣ,**
**ಲಿಂಗಕ್ಕೆ ಮಾಡಿದೆಂದ ಸೊಂಕದೆ ಹೋದೆಯಲ್ಲ ಬಸವಣ್ಣ,**
**ಜಂಗಮಕ್ಕೆ ಮಾಡಿದ ಮಾಟವ ಕೈಯಲ್ಲಿ ಹಿಡಿದುಕೊಂಡು ಹೋದೆಯಲ್ಲ ಬಸವಣ್ಣ,**
**ಬೆಳಗನುಟ್ಟು ಬಯಲಾಗಿ ಹೋದೆಯಲ್ಲ ಬಸವಣ್ಣ,**
**ಆ ಬಸವಣ್ಣಂಗೆ ಶರಣೆಂಬ ಪಥವನೇ ತೋರು ಕಂಡಾ ಕಲಿದೇವರದೇವ.**

ಶೀಲವಂತ ಮತ್ತು ಲಾವಣ್ಯರು ಲಿಂಗಧಾರಿಗಳಾಗಿ ಜಾತಿಯನ್ನು ಮೀರಿದ್ದರೂ ಅವರನ್ನು

ಲಿಂಗವಂತ ಅಥವಾ ಲಿಂಗಾಯತರೆಂದು ಪರಿಗಣಿಸದೇ ಅದೊಂದು ಅಂತರ್‌ಜಾತಿ ಮದುವೆ ಎಂದು ಬಿಂಬಿಸಿ, ಈ ಕಾರಣಕ್ಕಾಗಿ ಕಲ್ಯಾಣ ಕ್ರಾಂತಿಯಾದಾಗ ಪ್ರಧಾನಿಯಾಗಿದ್ದ ಬಸವಣ್ಣ ಪ್ರಧಾನಿ ಪದವಿ ತ್ಯಾಗ ಮಾಡಿ ಪೋಷಾಕು ಹರಿದು, ಪಾದರಕ್ಷೆ ಕಳೆದು, ಕಿರೀಟ ಕಳಚಿಟ್ಟು ರಾಜಧಾನಿ ಬಿಟ್ಟು ಸರಳವಾಗಿ ನಿರ್ವಿಕಾರ ಭಾವದಲ್ಲಿ ಹೋದಾಗಿನ ಪ್ರಸಂಗವಿಲ್ಲಿ ಮಾಚಯ್ಯ ಬಹಳ ನೋವಿನಿಂದ ಬಿಂಬಿಸಿದ್ದಾರೆ. ಇಷ್ಟಲಿಂಗ, ಜಂಗಮತತ್ವ ಮತ್ತು ಸಾಮಾಜಿಕ ಕ್ರಾಂತಿಯನ್ನು ಹಿಡಿದುಕೊಂಡೇ ಹೋದ ಬಸವಣ್ಣನಿಗೆ ಯುದ್ಧವೆಂಬ ರಕ್ತಕ್ರಾಂತಿ ಬೇಕಾಗಿರಲಿಲ್ಲ. ಶರಣರು ಮರಣವೇ ಮಹಾನವಮಿ ಎಂದರಿತಿದ್ದರು. ಆದರೆ ವಚನಗಳನ್ನು ಉಳಿಸಿಕೊಳ್ಳಬೇಕು ಅವುಗಳನ್ನು ಮುಂದಿನ ಜನಾಂಗಕ್ಕೆ ಕೊಡಬೇಕೆಂಬ ತವಕ ಇತ್ತು. ಆ ಕಾರಣಕ್ಕಾಗಿ ಸ್ವತಃ ಬಸವಣ್ಣನವರೇ ಬೆಳಗನುಟ್ಟು ಬಯಲಾಗಿ ಹೋಗಿ ಕೂಡಲಸಂಗಮದಲ್ಲಿ ಬಯಲಾದರು. ಶರಣರೆಲ್ಲ ಅಳಿದರೂ ಸಮಸಮಾಜ ನಿರ್ಮಾಣವಾಗದುದ್ದಕ್ಕೆ ಚಿಂತಿತರಾಗದ ಬಸವಣ್ಣ ಮುಂದೊಂದು ದಿನ ತಮ್ಮೀ ಕನಸು ನನಸಾಗುತ್ತದೆ ಎಂದುಕೊಂಡರು. ಇಂಥ ಬಸವಣ್ಣನವರ ಸಮಸಮಾಜದೆಡೆ ಸಾಗುವಂಥ ದಾರಿಯನ್ನು ನನಗೆ ತೋರಿಸೆನ್ನುತ್ತಾರೆ. ಇದು ಮಾಚಯ್ಯ ತಮಗೆ ತಾವು ಹೇಳಿಕೊಂಡಂತೆನಿಸಿದರೂ ಬಸವ ತತ್ವದಲ್ಲಿ, ವಚನ ಸಂಸ್ಕೃತಿಯಲ್ಲಿ ನಂಬಿಕೆ ಇಟ್ಟುಕೊಂಡವರೆಲ್ಲರ ಹೊಣೆಯಾಗಿದೆ.

ವಿವಿಧ ಶರಣರು ತಮ್ಮದೇ ರೀತಿಯಲ್ಲಿ ಮಾಚಯ್ಯನ ಕುರಿತು ಅಭಿವ್ಯಕ್ತಿಸಿದ್ದಾರೆ. ಅಲ್ಲಮರು "ಗುಹೇಶ್ವರ ಲಿಂಗದಲ್ಲಿ ಬಸವಣ್ಣನ ಕೃಪೆಯಿಂದ ನಿನ್ನ ಕಂಡೆ ಮಡಿವಾಳ ಮಾಚಯ್ಯ" ಎನ್ನುವಲ್ಲಿ ಅವರ ಅಂತರಂಗದ ದೈವವಾದ ಗುಹೇಶ್ವರ ಲಿಂಗದಲ್ಲಿ ಮಾಚಯ್ಯನವರನ್ನು ತಾವು ಕಂಡ ಬಗೆ ಮತ್ತು ಇದಕ್ಕೆ ಬಸವಣ್ಣನ ಕೃಪೆಯೇ ಕಾರಣ ಎಂಬ ವಿನೀತ ಭಾವದಲ್ಲಿ ನುಡಿದಿರುವುದನ್ನು ಗಮನಿಸಬೇಕು. ಜೊತೆಗೆ ಅಲ್ಲಮರು ಮಾಚಯ್ಯನನ್ನು ಅತ್ಯಂತ ಮಹತ್ವದ ಸ್ಥಾನದಲ್ಲಿ ಕಂಡುಕೊಂಡಿರುವುದಾಗಿ ತಿಳಿಯುತ್ತದೆ. ಅಕ್ಕಮಹಾದೇವಿಯಂತೂ "ಬಸವಣ್ಣನೇ ಗುರು, ಪ್ರಭುದೇವರೇ ಲಿಂಗ, ಸಿದ್ಧರಾಮನೇ ಜಂಗಮ, ಮಡಿವಾಳಯ್ಯ ಎನ್ನ ಹೆತ್ತ ತಂದೆ" ಎಂದು ಮಾಚಯ್ಯನ ಮಗಳು ತಾನೆಂದು ಹೇಳುತ್ತಾಳೆ. ಇಲ್ಲಿ ಮಾಚಯ್ಯನವರು ಅತ್ಯುನ್ನತ ಮಟ್ಟದಲ್ಲಿಯ ಅಕ್ಕನಿಗೇ ತಂದೆಯ ಸ್ಥಾನದಲ್ಲಿರುವುದನ್ನು ಗಮನಿಸಬಹುದು. ಚೆನ್ನಬಸವಣ್ಣ "ಎನ್ನಂತರಂಗವೇ ಬಸವಣ್ಣ, ಬಹಿರಂಗವೇ ಮಡಿವಾಳ, ಇವರಿಬ್ಬರ ಪ್ರಸಾದ ಸಾಹಿತ್ಯ ನಾನೇ ಕೂಡಲ ಚೆನ್ನಸಂಗಮದೇವ" ಎಂದು ಚೆನ್ನಬಸವಣ್ಣ ತನ್ನ ಅಂತರಂಗದಲ್ಲಿ ಬಸವಣ್ಣನನ್ನು ಬಹಿರಂಗದಲ್ಲಿ ಮಡಿವಾಳ ಮಾಚಯ್ಯನವರನ್ನು ಪ್ರತಿಷ್ಠಾಪಿಸಿಕೊಂಡು ಆ ಮೂಲಕ ತಾವು ಪಡೆದ ಅರಿವನ್ನು ಪ್ರಸಾದವಾಗಿಸಿಕೊಂಡು ತಾವು ಮತ್ತು ತಮ್ಮ ಅರಿವನ್ನು ಜಂಗಮವಾಗಿಸಿಕೊಳ್ಳುವ ಮೂಲಕ ತಾವು ಪ್ರಸಾದ ಸಾಹಿತ್ಯವಾಗಿರುವದನ್ನು ಮಾರ್ಮಿಕವಾಗಿಲ್ಲಿ ಬಿಂಬಿಸುತ್ತಾರೆ.

ಮಡಿವಾಳ ಮಾಚಯ್ಯನವರು ಶರಣರ ಬಟ್ಟೆಗಳನ್ನು ಮಡಿಮಾಡುವುದರ ಜೊತೆಗೆ ಮಲೀನವಾದ ವ್ಯವಸ್ಥೆಯ ಕೊಳೆಯನ್ನು ತೊಳೆದು ಮಡಿ ಮಾಡುವ ಮನಸ್ಥಿತಿಯಿಂದ ರಚಿಸಿದ ವಚನಗಳು ಮತ್ತವರ ಧೋರಣೆಗಳು ಸರ್ವಕಾಲಿಕವಾಗಿ ಚಲನಶೀಲ ವಾಗಿರಬೇಕೆಂದು ಬಯಸಿದ್ದವರು. ಹಾಗಾಗಿ ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ವಚನಗಳ ರಕ್ಷಣೆಗಾಗಿ ಉಳವಿಯತ್ತ ಪ್ರಯಾಣಿಸುವ ಶರಣರಲ್ಲಿ ತಾವು ಸೇರಿಕೊಂಡು ಶರಣರನ್ನು ಮತ್ತವರ ವಚನಗಳನ್ನು ರಕ್ಷಿಸುವ ಪವಿತ್ರವಾದ ಹೊಣೆ ಹೊತ್ತುಕೊಳ್ಳುತ್ತಾರೆ. ಅಲ್ಲಿ ಪ್ರತಿ ಹಂತದಲ್ಲಿ ಸಾಹಸವನ್ನು ಮೆರೆದರು. ಅದೊಂದು ಬಗೆಯ ಪ್ರಗತಿಯ ಕ್ರಾಂತಿ, ಪರಿವರ್ತನೆ ಬಯಸಿ ಹೋರಾಡುವಾಗ ಶರಣರೆಲ್ಲರೂ ಮರಣವೇ ಮಹಾನವಮಿ ಎಂದು ಲಿಂಗೈಕ್ಯರಾದ ನಂತರ ಇವರು ಏಕಾಂಗಿಯಾಗಿಯೂ ಹೋರಾಡಿದರು. ಕ್ರಾಂತಿಯ ಮೂಲಕ ಪ್ರಗತಿಪರತೆಯನ್ನು ಕಾಣಬೇಕೆಂಬ ಹಸಿವನ್ನಿರಿಸಿಕೊಂಡ ಒಡಲುಗೊಂಡವರಳಲಿಗೆ ಇವರ ವಚನಗಳ ಧೋರಣೆಯಲ್ಲಿ ಉತ್ತಮ ತುತ್ತು ಸಿಗಬಲ್ಲದು. ಈ ಬಗೆಯ ಒಡಲುಗೊಂಡವರಳಲಿಗೆ ಸಾಂತ್ವನ ಸಿಗಬಹುದು. ಮಾಚಯ್ಯ ಶರಣರು ಕೊನೆಗೆ ಇಂದಿನ ಸಿಂಧಗಿ ತಾಲ್ಲೂಕಿನ ಕಲಿಪುರ ಅಥವಾ ಕಲಕೇರಿ ಎಂಬ ಊರಲ್ಲಿ ಹೊಸ್ತಿಲ ಹುಣ್ಣಿಮೆ ಮೂಲಾ ನಕ್ಷತ್ರದ ದಿವಸ ತಮ್ಮ ಗುರುವಿನೊಂದಿಗೆ ಜೀವಂತ ಸಮಾಧಿಯಾಗುತ್ತಾರೆಂದು ನಂಬಲಾಗಿದೆ. ಇನ್ನೊಂದು ಪ್ರತೀತಿಯ ಪ್ರಕಾರ ಅವರು ಬೆಳಗಾವಿ ಜಿಲ್ಲೆಯ ಗೊಡಚಿ ಹತ್ತಿರ ಲಿಂಗೈಕ್ಯರಾದ ಕಾರಣ ಅಲ್ಲಿ ಇವರ ಸಮಾಧಿ ಇರುವುದಾಗಿಯೂ ಐತಿಹ್ಯವಿದೆ. ಈ ವಿವರಗಳನ್ನೆಲ್ಲ ಸಂಶೋಧಕರ ಶೋಧಕ್ಕೆ ಬಿಡೋಣ.

ಇಂದಿಗೂ ಬಸವಕಲ್ಯಾಣದ ತ್ರಿಪುರಾಂತಕ ಕೆರೆಯಿಂದ ಸ್ವಲ್ಪ ದೂರದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಮಡಿವಾಳ ಮಾಚಯ್ಯನ ಹೊಂಡವಿದೆ. ಒಂದು ಗುಡಿಯಿದೆ ಅಲ್ಲಿ ಜೋಡಿ ಶಿವಲಿಂಗ ಕಾಣಸಿಗುತ್ತವೆ. ಭಕ್ತಿಯೆಂಬ ಮಡಿಯಿಂದ ದರ್ಶನ ಪಡೆಯುವ ಪದ್ಧತಿ ಇದೆ. ಮತ್ತೇ ಇಲ್ಲಿ ಮಾನಸಿಕ ಮಡಿತನವನ್ನು ಸಾಂಕೇತಿಕವಾಗಿ ಬಿಂಬಿಸುತ್ತದೆ. ಹಾಗೆಯೇ ಸಿಂಧಗಿ ತಾಲ್ಲೂಕಿನ ಡೋಣಿ ಕೊಂಡಗುಳಿಯಲ್ಲಿ ಮಡಿವಾಳ ಮಾಚಯ್ಯನ ಗುಡಿ ಇದೆ. ದೇವರ ಹಿಪ್ಪರಗಿಯಲ್ಲಿ ಗುಡಿಯೊಂದಿದೆ. ಇವರು ವಾಸಿಸಿದ್ದರೆಂದು ನಂಬಲಾದ ಮನೆಯೊಂದಿದೆ ಅಲ್ಲಿ ಕಲ್ಮೇಶ್ವರ (ಕಲ್ಲಿನಾಥ) ಗುಡಿಯ ಹತ್ತಿರವಿರುವ ಇವರ ಮನೆಯಲ್ಲಿ ಇವರು ಬಳಸುತ್ತಿದ್ದ ಖಡ್ಗವನ್ನೂ ನೋಡಬಹುದು. ಈಗ ಈ ಮನೆ ಮಠವಾಗಿದೆ. ಸಿಂಧಗಿ ತಾಲ್ಲೂಕಿನ ಕೊಕಟನೂರಲ್ಲಿಯೂ ಒಂದು ಗುಡಿ ಇದೆ. ಈ ಭಾಗದಲ್ಲೆಲ್ಲ ಮಾಚಯ್ಯನವರು ಆರಾಧ್ಯ ದೈವವಾಗಿದ್ದಾರೆ. ಹೀಗೆ ಭೌತಿಕವಾಗಿ ಅವರನ್ನು ನೆನಪಿಸುವಂಥ ಸ್ಮಾರಕಗಳ ಜೊತೆಗೆ, ಅಂಗವಳಿದಿದ್ದರೂ ಅವರ ಅಂಗದೊಳಗಿನ ಲಿಂಗ ವಿಚಾರಗಳು ಇಂದಿಗೂ ಪ್ರಸ್ತುತವಾಗಿವೆ. ಪ್ರಗತಿಪರ, ಆತ್ಮಶುದ್ಧತೆ, ಶುಚಿತ್ವ ಅಂತರಂಗ ಮತ್ತು ಬಹಿರಂಗ ಶುದ್ಧತೆ, ಅನ್ಯಾಯದ ಅಸಮಾನತೆ ವಿರುದ್ಧದ ಹೋರಾಟದ ಮೂಲಕ ಮನಸ್ಸಿನ ಶುದ್ಧತೆ ಮಾಡಿದವರು, ಹೀಗೆ ಮಾಡಬೇಕೆಂಬುದು ಅವರ ಒಡಲಾಳದ ಹಸಿವಾಗಿತ್ತು. ಇಂಥ ಅಪ್ರತಿಮ ಮಾಚಯ್ಯ. ಮತ್ತವರ ಆ ವಿಚಾರಗಳ ಧೋರಣೆಯಲ್ಲಿ ನಾವು ಬೆಳಕನ್ನು ಕಂಡುಕೊಂಡರೆ ಪರಮಾತ್ಮನಲ್ಲಿ ಲಿಂಗೈಕ್ಯವಾದ ಅವರ ಲಿಂಗದಲ್ಲಿದ್ದ ಜೀವಾತ್ಮ ಮೆಚ್ಚಿ ಹೌದೌದೆನ್ನಬಹುದೇನೋ? ಇಂದಿನ ಮಲೀನವಾದ ಅವ್ಯವಸ್ಥೆಗೆ, ಅವ್ಯವಸ್ಥೆಯೊಳಗಿನ ಮಲೀನ "ಮನಸ್ಸಿನ ಮಡಿತನಕ್ಕೆ ಬೇಕು ಮಾಚಯ್ಯನ ಮಡಿವಾಳತನ". ವಿವಿದ ಬಗೆಯ ಹಸಿವಿನ ಒಡಲುಗೊಂಡವರಳಲಿಗೆ ಬೇಕು ಇಂಥ ಶರಣ ಸಾಧಕರ ಚಿಂತನೆ ಮತ್ತು ಧೋರಣೆಗಳೆಂಬ ಅನ್ನದ ತುತ್ತು.

●

## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೩೧ರ ಸರಿಯುತ್ತರಗಳು

೧. (ಇ) ಪ್ರೊ. ಮಹೇಶ ತಿಪ್ಪಶೆಟ್ಟಿ ೨. (ಅ) ಅರಿವೆಂಬ ಅಲ್ಲಮ
೩. (ಈ) ಗುಪ್ತ ಮಂಚಣ್ಣ ೪.(ಆ) ಅರಿವು ಬತ್ತಿ ಹೋಗಿ ೫. (ಅ) ಕುರುಂಗೇಶ್ವರ ಲಿಂಗ

'ಮಹಾಮನೆ'ಯ "ವಚನ ರಸಪ್ರಶ್ನೆ-೩೧"ಕ್ಕೆ ಯಾರೂ ಸರಿಯುತ್ತರ ಕಳಿಸಿಲ್ಲದ ಕಾರಣ, ಈ ಸಂಚಿಕೆಯ ಬಹುಮಾನಗಳನ್ನು ಯಾರಿಗೂ ಕೊಡಲಾಗಿಲ್ಲ.

### ವಚನ ರಸಪ್ರಶ್ನೆ-೩೨ರ ಪ್ರಶ್ನೆಗಳು

೧. ಸುರಾಳ ಪದದ ಅರ್ಥ:
(ಅ) ಗಾಢನಿದ್ರೆ (ಆ) ಸುಡು
(ಇ) ಗುರಾಣಿ (ಈ) ಸಗುಣ

೨. ಹರಡಿ ಎನ್ನುವ ಅರ್ಥ ಬರುವ ಪದ ಇವುಗಳಲ್ಲಿ ಯಾವುದು?
(ಅ) ನುಲಿ (ಆ) ನೆರಹಿ
(ಇ) ನಿಗುಚಿ (ಈ) ನೆರೆ

೩. 'ಕೂಡಲಸಂಗಮ ದೇವರಲ್ಲಿ ಬಸವಣ್ಣ' – ಎನ್ನುವ ಅಂಕಿತನಾಮ ಯಾರದು?
(ಅ) ಉಗ್ಘಡಿಸುವ ಗುಬ್ಬಿದೇವಯ್ಯ (ಆ) ಸಂಗಮೇಶ್ವರದ ಅಪ್ಪಣ್ಣ
(ಇ) ಹಡಪದ ಅಪ್ಪಣ್ಣ (ಈ) ಬೊಕ್ಕಸದ ಚಿಕ್ಕಣ್ಣ

೪. ಅರಿವಿನೊಡನೆ ಅನುಸಂಧಾನ ಕೃತಿ ಯಾರದು?
(ಅ) ಡಾ. ಬಸವರಾಜ ಕಲ್ಗುಡಿ (ಆ) ಡಾ. ನಾ. ಮೊಗಸಾಲೆ
(ಇ) ಶಿ.ಶಿ. ಬಸವನಾಳ (ಈ) ಮೃತ್ಯುಂಜಯ ರುಮಾಲೆ

೫. ಕೆ.ಜಿ. ನಾಗರಾಜಪ್ಪ ಅವರ ಯಾವ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ.
(ಅ) ವಚನ ಸಾವಿರ (ಆ) ನಕ್ಷೆ ನಕ್ಷತ್ರ
(ಇ) ಅನುಶ್ರೇಣಿ ಯಜಮಾನಿಕೆ (ಈ) ವಚನ ಧರ್ಮ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**
ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.



# ಅಗಣಿತ

ಡಾ. ಅಮರೇಶ ನುಗಡೋಣಿ
'ಸೂರು', ಎಂ.ಪಿ. ಪ್ರಕಾಶ ನಗರ,
ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ – ೫೮೩ ೨೦೧
ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೫

ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ
ಪ್ರತ್ಯಕ್ಷವಾದ ಪರಮೇಶ್ವರನ ಕಂಡು
ಇತ್ತಲೇಕಯ್ಯ ಕಾಯದ ತಿತ್ತಿಯ ಹೊತ್ತಾಡುವನ ಮುಂದೆ?
ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ
ಮುಕ್ತಿಯ ಮಾಡು! ನೀ ಹೊತ್ತ ಬಹುರೂಪ
ತಪ್ಪದೆ – ರಜತ ಬೆಟ್ಟದ ಮೇಲಕ್ಕೆ ಹೋಗು –
ನಿನ್ನ ಭಕ್ತರ ಮುಕ್ತಿಯ ಮಾಡು – ಕಾಮ
ಧೂಮ ಧೂಳೇಶ್ವರನ ಕರುಣದಿಂದ ನೀನೇ ಬದುಕು
– ಮಾದಾರ ಧೂಳಯ್ಯ

ಮಾದಾರ ಧೂಳಯ್ಯನ ಈ ವಚನವು, ಕಾಯಕ ನಿರತನ ನಿಲುವನ್ನು, ದೃಢತೆಯನ್ನು ಸೂಚಿಸುತ್ತದೆ. ವಚನ ಸಾಹಿತ್ಯದ ಮುಖ್ಯ ತತ್ವಗಳಲ್ಲಿ ಕಾಯಕತತ್ವ ಒಂದು ಮತ್ತು ಪ್ರಧಾನವಾದದ್ದು. ಕಾಯಕದ ಮಹತ್ವವನ್ನು ಹೇಳದ ವಚನಕಾರನಿಲ್ಲ ಅನ್ನಿಸುತ್ತದೆ. ಮಾದಾರ ಧೂಳಯ್ಯ ತೊಗಲಿನ ಚಪ್ಪಲಿ ಮಾಡಿ ಭಕ್ತರಿಗೆ ನೀಡುವ ಕಾಯಕದವನು. ಎಲ್ಲ ಶರಣ ಕಾಯಕ ಜೀವಿಗಳಂತೆ ಮಾಡುವ ಕೆಲಸದಲ್ಲಿ ನಿಷ್ಠೆ ಪ್ರಾಮಾಣಿಕತೆ ಇದ್ದದ್ದು ಸಹಜ.

ಈ ವಚನದ ವಿಶೇಷತೆಯೆಂದರೆ, ಚಪ್ಪಲಿ ಹೊಲಿಯುವ ಕಾಯಕದಲ್ಲಿ ತೊಡಗಿಕೊಂಡಿದ್ದಾಗ, ಶಿವ ಬಂದು ಅಡ್ಡಿಯುಂಟು ಮಾಡುವುದನ್ನು ಕಂಡು ಕಾಯಕ ಜೀವಿಗೆ ಸಿಟ್ಟು ಬರುತ್ತದೆ. ಶಿವ ಬಂದದ್ದು ಯಾಕೆ? ಹೊತ್ತುಗಳೆಯಲಿಕ್ಕೆ. ಕಲ್ಯಾಣದಲ್ಲಿ ಎಲ್ಲರೂ ಕಾಯಕದಲ್ಲಿ ತೊಡಗಿಕೊಂಡಿರುವಾಗ, ಶಿವನಿಗೆ ಹೊತ್ತು ಕಳೆಯಲು ಯಾರೂ ಸಿಗುತ್ತಿಲ್ಲ. ಹುಡುಕಿ ಸಾಕಾಗಿರಬೇಕು. ಬಡವನಾದ ಧೂಳಯ್ಯನಲ್ಲಿಗೆ ಬಂದು 'ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ' ಶಿವ ಕಂಡು ಬಂದಾಗ ಕಾಯಕದ ಧೂಳಯ್ಯ 'ಇತ್ತಲೇಕಯ್ಯ?' ಎಂದು ಪ್ರಶ್ನಿಸುತ್ತಾನೆ. ತನ್ನ ಕಾಯಕದ ಪರಿಕರಗಳನ್ನು ತುಂಬಿಕೊಂಡ ಚೀಲ (ತಿತ್ತಿಯ) ಹೊತ್ತು ನಡೆದಾಡುವವನ್ನು ಕಂಡು ಪೀಡಿಸಿದಂತೆ ಕಾಣುತ್ತದೆ. ಶಿವನನ್ನು ಕಾಣುವುದಕ್ಕೆ ಅದೆಷ್ಟು ಭಕ್ತರು ಪರಿತಪ್ಪಿಸುತ್ತಿರುವಾಗ ಧೂಳಯ್ಯ 'ಇತ್ತಲೇಕಯ್ಯಾ' ಎಂದು ಕೇಳುತ್ತಾನೆ.

ನನ್ನ ಬಳಿ ಯಾಕೆ ಬಂದುದ್ದು? ಎಂದು ಕೇಳುತ್ತಲೇ ಶಿವನಿಗೆ ವ್ಯಂಗ್ಯ ಮಾಡುತ್ತಾನೆ. ಕಾಯಕ ಮಾಡದವರು, ಶಿವನ ಹೆಸರೇಳುತ್ತ ಹಿಮಾಲಯಕ್ಕೆ ಹೋಗಿ ಧ್ಯಾನ, ತಪಸ್ಸು ಮಾಡುವ ಸತ್ಯದ ನೆಲೆ ತಿಳಿಯದ 'ನಿನ್ನ ಮಂದಿ'ಯ ಬಳಿಗೆ ನೀನೂ ಹೋಗು. ಅವರ ಜತೆ ಹೊತ್ತುಗಳಿ. ಬೇಕಾದರೆ ಅವರನ್ನು ಕಾಪಾಡು ಎಂದು ಧೂಳಯ್ಯ ಹೇಳುತ್ತಾನೆ. ಈ ವಚನದಲ್ಲಿ 'ಮುಕ್ತಿಯ ಮಾಡು' ಎಂದು ಎರಡು ಸಲ ಬರುತ್ತದೆ. ವ್ಯರ್ಥ ಹೊತ್ತು ಕಳೆಯುವ ಭಕ್ತರಿಗೆ ಅರಿವು ಮೂಡಿಸಿ ಕಾಯಕದಿಂದ ಮಾತ್ರ ಮುಕ್ತಿ ಸಾಧ್ಯವೆಂದು ಹೇಳಿ, ಅಲ್ಲಿಂದ ಬಿಡುಗಡೆಗೊಳಿಸು. ನೀನೂ(ಶಿವನಿಗೆ) 'ಕಾಮಧೂಮ ಧೂಳೇಶ್ವರನ ಕರುಣೆದಿಂದ ನೀನೇ ಬದುಕು' ಎಂದು ಉಪದೇಶ ಮಾಡುತ್ತಾನೆ. ಶಿವನಿಗಿಂತ ಶಿವಶರಣರು ದೊಡ್ಡವರು ಎಂಬ ಮಾತಿದೆ. ಶರಣ ಧೂಳಯ್ಯ ಶಿವನಿಗೆ ಉಪದೇಶ ಮಾಡುತ್ತಾನೆ.

ಧೂಳಯ್ಯನ ವಚನಕ್ಕೆ ಸಂವಾದಿಯಾಗಿ ಆಯ್ದಕ್ಕಿ ಮಾರಯ್ಯನ ಈ ಕೆಳಗಿನ ವಚನವಿದೆ.

**ಕಾಯಕದಲ್ಲಿ ನಿರತನಾದಡೆ**
**ಗುರುದರ್ಶನವಾದರೂ ಮರೆಯಬೇಕು**
**ಲಿಂಗಪೂಜೆಯಾದರೂ ಮರೆಯಬೇಕು**
**ಜಂಗಮ ಮುಂದೆ ನಿಂದಿದ್ದಡೂ ಹಂಗು ಹರಿಯಬೇಕು**
**ಕಾಯಕವೇ ಕೈಲಾಸವಾದ ಕಾರಣ**
**ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು**

ಈ ವಚನದ ತಿರುಳು ಏನೆಂಬುದು ವಚನಭ್ಯಾಸಿಗಳಿಗೆ ತಿಳಿದಿರುತ್ತದೆ. ಧೂಳಯ್ಯನ ವಚನದಲ್ಲಿ ಶಿವನನ್ನು ದೂರ ನಿಲ್ಲಿಸುವ, ಕಳಿಸುವ ಚಿತ್ರವಿದೆ. ಆಯ್ದಕ್ಕಿ ಮಾರಯ್ಯನ ವಚನದಲ್ಲಿ ಗುರು, ಲಿಂಗ, ಜಂಗಮ ಮೂವರನ್ನು ದೂರ ನಿಲ್ಲಿಸಲಾಗಿದೆ. ಅಷ್ಟೆ ಯಾಕೆ ಮರೆಯಬೇಕು. ಹಂಗು ಹರಿಯಬೇಕು ಎಂದು ಹಂಗಿಲ್ಲದೆ ಹೇಳಿದೆ. ಗುರು, ಲಿಂಗ, ಜಂಗಮ ಮೂವರು ಶಿವನೊಳಗೇ ಇರುವವರು. ಆದರೂ ವಚನಕಾರರು ಆಯಾ ಸಂದರ್ಭದಲ್ಲಿ ಶಿವನಿಗೂ ಗುರು, ಲಿಂಗ, ಜಂಗಮ ಮೇಲು ಎಂದು ಹೇಳುತ್ತಾರೆ. ಇರಲಿ.

ಕಾಯಕಕ್ಕೆ ನಿಂತರೆ ಮುಗಿಯಿತು. ಅದು ಮುಗಿಯುವವರೆಗೆ ಯಾರು ಬಂದರೂ ಕಾಯಕ ನಿಲ್ಲಿಸಿ ಅವರನ್ನು ಗೌರವಿಸುವ ಅಗತ್ಯವಿಲ್ಲವೆಂಬ ಧ್ವನಿ ಇಲ್ಲಿದೆ. ವಚನಕಾರರು ಮತ್ತೆ ಮತ್ತೆ ಈ ನಿಯಮವನ್ನು ಮೀರಬಾರದೆಂದು ಎಚ್ಚರಿಸುತ್ತಾರೆ. ಕಾಯಕ ಅದರಿಂದ ಆದ ಉತ್ಪಾದನೆ ಅದರ ಫಲದಿಂದ ಉಪಜೀವನ ಮತ್ತು ದಾಸೋಹ ನಡೆಸುವುದು ಶರಣರಿಗೆ ಮುಖ್ಯ. ಇದೊಂದು ಕಡೆ ಕಾಯಕದಿಂದ ಉತ್ಪಾದನೆಯಾದ ಸರಕು ಮಾರಾಟ, ಅದರ ವ್ಯವಹಾರ – ವ್ಯಾಪಾರದಿಂದ ತೆರಿಗೆ ಸಂಗ್ರಹ. ಇದು ರಾಜನಿಗೆ ಆದಾಯ, ರಾಜ್ಯದ ಅಭಿವೃದ್ಧಿಗೆ ಬುನಾದಿಯಾಗಿತ್ತು. ಮಂತ್ರಿಯಾಗಿದ್ದ ಬಸವಣ್ಣನಿಗೆ ಎರಡೂ ಪ್ರಧಾನವಾಗಿದ್ದವು. ಕಾಯಕವನ್ನು ಪವಿತ್ರಗೊಳಿಸುವುದು; ಕಸುಬುದಾರರಿಗೆ ಗೌರವ ತರುವುದು. ರಾಜ್ಯದ ಬೊಕ್ಕಸವನ್ನು ತುಂಬುವಂತೆ ಮಾಡುವುದೂ ಅಷ್ಟೇ ಮುಖ್ಯವಾಗಿತ್ತು.

ಗುರುಲಿಂಗ ಜಂಗಮದ ಹಂಗು ತೊರೆದು ಕಾಯಕಕ್ಕೆ ತೊಡಗಬೇಕು. ಯಾಕೆಂದರೆ 'ಕಾಯಕವೇ ಕೈಲಾಸ'. ಹುಟ್ಟಿದ ಮನುಷ್ಯನಿಗೆ ಬಾಳುವುದು ಈ ನೆಲದ ಮೇಲಿನ ಸಮಾಜದಲ್ಲಿ.



ಇಲ್ಲಿ ಸರಿಯಾಗಿ ಬಾಳಿದರೆ ಇಲ್ಲೇ ಕೈಲಾಸ. ಒಂದು ವೇಳೆ ಇಲ್ಲಿ ಸಲ್ಲದಿದ್ದರೆ ಕೈಲಾಸದಲ್ಲಿಯೂ ಸಲ್ಲಲು ಸಾಧ್ಯವಿರಲಿಲ್ಲ.

ಕಾಯಕ ಎಂದರೆ ದೇಹ – ಮನಸ್ಸು ಎರಡೂ ತೊಡಗಿಕೊಳ್ಳುವುದೋ? ಅಥವಾ ದೇಹ ಶ್ರಮ ಮುಖ್ಯವೋ, ಮಾನಸಿಕ ಶ್ರಮ ಮುಖ್ಯವೋ? ಈ ಪ್ರಶ್ನೆಗಳು ವಾದವನ್ನು ಅವಲಂಬಿಸಿ ಉತ್ತರ ಪಡೆಯಬಲ್ಲವು. ಕಸಬುದಾರರು ದೇಹ ಮತ್ತು ಮನಸ್ಸನ್ನು ತೊಡಗಿಸಿಕೊಂಡೇ ಕೆಲಸ ಮಾಡುತ್ತಾರೆ. ದೇಹ – ಮನಸ್ಸಿನ ಶ್ರಮದಿಂದಲೇ ದೈಹಿಕ ಆರೋಗ್ಯ ಸಾಧ್ಯವೆಂದು ಕಣ್ಣಿಗೆ ಕಾಣುತ್ತದೆ. ಮನಸ್ಸಿನ ಶ್ರಮವನ್ನು ಅವಲಂಬಿಸಿದವರು ಪುರೋಹಿತರು. ನಾನಾ ರೀತಿಯ ಪುರೋಹಿತರು ನಾನಾ ರೀತಿಯ ಕೆಲಸದಲ್ಲಿ ತೊಡಗಿಕೊಂಡಿರಬಹುದು. ಪ್ರವಚನ, ಬೋಧನೆ, ಪೂಜೆ ಈ ಕಾಯಕಗಳಿಂದ ದೇಹ ಶ್ರಮ ಕಮ್ಮಿ. ಅದರಿಂದ ದೈಹಿಕ ಬಾಧೆಗಳು ಅಂಟಿಕೊಳ್ಳುತ್ತವೆ. ರೈತರಿಗೆ, ಕಾರ್ಮಿಕರಿಗೆ ಯೋಗ, ವ್ಯಾಯಾಮ ಬೇಕಿಲ್ಲ. ಕುಳಿತು ದೇಹ ಶ್ರಮವಿಲ್ಲದವರಿಗೇ ಯೋಗ, ವ್ಯಾಯಾಮ, ಆಸನಗಳು ಬೇಕು. ಇದನ್ನು ಪೂರೈಸಲು ಈ ಕಾಲದಲ್ಲಿ ಯೋಗ ಗುರುಗಳ ಹಾವಳಿ ಹೆಚ್ಚಾಗಿದೆ. ಮಸಾಜ್ ಕೇಂದ್ರಗಳು ತಲೆ ಎತ್ತಿವೆ. ದೊಡ್ಡ ವ್ಯಾಪಾರ ಕೇಂದ್ರಗಳಾಗಿ ಬೆಳೆದಿವೆ.

ದೇಹ ಆರೋಗ್ಯವಾಗಿದ್ದರ ಅದೇ ಕೈಲಾಸ. ಕಾಯಕದಿಂದ ಕಾಯ – ಮನಸ್ಸು ಮುಕ್ತಿ ಪಡೆಯುತ್ತವೆ. ಈ ನೆಲದ ಮೇಲೆಯೇ.

ಕಸಬುದಾರರ ಕಸುಬಿನ ಬಗ್ಗೆ ವಚನಕಾರರು ಉನ್ನತ ಮಟ್ಟದ ವಿಚಾರಗಳನ್ನು ವಚನಗಳ ಮೂಲಕ ನಿರೂಪಿಸಿದ್ದಾರೆ. ಕಸುಬುದಾರರು ಗಳಿಸಿದ್ದನ್ನು ದಾಸೋಹದ ಮೂಲಕ ವ್ಯಯ ಮಾಡಬೇಕು. ಕಾಯದಿಂದ ಬಂದಿದ್ದು ಅಲ್ಪವಾದರೂ ಅದೇ ಪ್ರಸಾದವೆಂದು ಜೀವಿಸಬೇಕು ಇತ್ಯಾದಿ ಕಸಬುದಾರರಿಗೆ ಅವರ ಕಸುಬಿನ ಬಗ್ಗೆ ಕಟ್ಟುನಿಟ್ಟಿನ ನಿಯಮಗಳನ್ನು ವಿಧಿಸಲಾಗಿದ್ದಂತೂ ನಿಜ. ಕಾಯಕದ ಲೌಕಿಕ ಸಾಧನೆ, ಅಧ್ಯಾತ್ಮದ ಸಾಧನೆಯನ್ನು ಎರಡನ್ನೂ ತಿಳಿಸಿದ್ದರು.

●



**ಈ ಲೋಕದ ಭೀತರು ಪರ ಲೋಕದ ಕಲಿಗಳು**
**ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯರೆಲ್ಲರು**
**ಅಜನಿತಂಗೆ ಸರಿಯೆ**
**ಮೂಜಗದಲ್ಲಿ ನಿರತರು**
**ಕೂಡಲಸಂಗನ ಶರಣರು**
**ತ್ರಿವಿದವನರಿಯರು**

# ಕಟ್ಟಿಗೆ: ಒಂದು ಪದ, ಆರು ಅರ್ಥ

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ**

*ನಂ. ೪೪೫, ೮ನೆ ಮುಖ್ಯರಸ್ತೆ*
*ಸರಸ್ವತಿಪುರಂ, ಮೈಸೂರು-೫೭೦ ೦೦೯*
*೯೪೮೦೫ ೭೯೮೫೭*

ನಮಗೆ ಪರಿಚಯವಿರುವ ದಿನಬಳಕೆಯ ಒಂದು ಅರ್ಥವನ್ನು ಮಾತ್ರ ಬಳಸಿಕೊಂಡು ವಚನಗಳನ್ನು ಓದಿ ತಿಳಿಯುವುದು ಕಷ್ಟ. ಅದಕ್ಕೆ ಉದಾಹರಣೆಯಾಗಿ ಕಟ್ಟಿಗೆ ಎಂಬ ಪದದ ಬಗ್ಗೆ ಕೆಲವು ಮಾತು.

ಹಲವು ವರ್ಷಗಳ ಹಿಂದೆ ಆಮುಗೆ ರಾಯಮ್ಮನವರ ವಚನವೊಂದು ಪಠ್ಯಪುಸ್ತಕದಲ್ಲಿ ಸೇರಿತ್ತು. ಅದರ ಎರಡು ಸಾಲುಗಳ ಬಗ್ಗೆ ಅನೇಕ ಅಧ್ಯಾಪಕರು ನನ್ನನ್ನು ಪ್ರಶ್ನಿಸಿದ್ದರು. ಆಗ ನಾನೂ ತಬ್ಬಿಬ್ಬಾಗಿದ್ದೆ. ಆ ಸಾಲುಗಳನ್ನು ನೋಡಿ:

ಎನ್ನ ಕಣ್ಣೊಳಗಣ ಕಟ್ಟಿಗೆಯ ಮುರಿಯುವವರಾರನೂ ಕಾಣೆ/ಎನ್ನ ಕಾಲೊಳಗಣ ಮುಳ್ಳ ತೆಗೆವವರಾರನೂ ಕಾಣೆ/ಎನ್ನ ಅಂಗದಲ್ಲಿದ್ದ ಅಹಂಕಾರವ ಸುಡುವವರಾರನೂ ಕಾಣೆ/ಎನ್ನ ಮನದಲ್ಲಿಪ್ಪ ಮಾಯಾ ಪ್ರಪಂಚುವ/ಕೆಡಿಸುವವರಾರನೂ ಕಾಣೆನಯ್ಯಾ/ಆದ್ಯರ ವೇದ್ಯರ ವಚನಂಗಳಿಂದ/ ಅರಿದೆವೆಂಬರು ಅರಿಯಲಾರರು ನೋಡಾ/ ಎನ್ನ ಕಣ್ಣೊಳಗಣ ಕಟ್ಟಿಗೆಯ ನಾನೆ ಮುರಿಯಬೇಕು/ ಎನ್ನ ಕಾಲೊಳಗಣ ಮುಳ್ಳ ನಾನೆ ತೆಗೆಯಬೇಕು/ಎನ್ನ ಅಂಗದಲ್ಲಿಪ್ಪ ಅಹಂಕಾರವ ನಾನೆ ಸುಡಬೇಕು/ಎನ್ನ ಮನದಲ್ಲಿಪ್ಪ ಮಾಯಾಪ್ರಪಂಚವ ನಾನೆ ಕಳೆಯಬೇಕು/ಅಮುಗೇಶ್ವರ ಲಿಂಗವ ನಾನೆ ಅರಿಯಬೇಕು (ಸಮಗ್ರ ವಚನ, ಸಂ. ೫, ವಚನ ೬೧೪)

ಇಲ್ಲಿ ಮಿಕ್ಕೆಲ್ಲ ಸಾಲುಗಳ ಅರ್ಥ ಸ್ಪಷ್ಟವಾದರೂ 'ಕಣ್ಣಿನೊಳಗಣ ಕಟ್ಟಿಗೆ' ಅಂದರೇನು ಅನ್ನುವುದು ಬಗೆಹರಿಯಲಿಲ್ಲ. ಇದೇ ನುಡಿಗಟ್ಟನ್ನು ಅಲ್ಲಮ ವಚನವೊಂದು ಬಳಸುವ ನಿದರ್ಶನವೂ ಇದೆ. 'ಕಂಗಳೊಳಗಣ ಕಟ್ಟಿಗೆಯ ಮುರಿಯದ, ಕೈಯೊಳಗಣ ಕಪ್ಪರವನೊಡೆಯದ, ತನ್ನೊಳಗಿಪ್ಪ ನಿಕ್ಷೇಪವ ಭೇದಿಸಿ ಕಾಣಲರಿಯದ ಬಿನುಗರೆಲ್ಲ/ ಹಲುಗಿರಿವುತ್ತಿಹರು ಕಾಣಾ ಗುಹೇಶ್ವರಾ(ಸಂ೨. ವ೧೦೩೬)

ಖಂಡಿತವಾಗಿ ಈ ಎರಡು ಉದಾಹರಣೆಗಳಲ್ಲಿ ಬರುವ ಕಟ್ಟಿಗೆ ಅನ್ನುವುದು ಸೌದೆಯಲ್ಲ, ದಿನ ಬಳಕೆಯಲ್ಲಿ ಬಳಸುವ 'ಕಟ್ಟಿಗೆ'ಯೂ ಅಲ್ಲ. ಕನ್ನಡದಲ್ಲಿ ಬಳಕೆಯಲ್ಲಿರುವ ಕಣ್ಕಟ್ಟು ಅಥವಾ ಕಣ್ಣುಕಟ್ಟು ಎಂಬ ನುಡಿಯನ್ನು ನೆನಪು ಮಾಡಿಕೊಳ್ಳಿ. ಅದು ಇಲ್ಲಿಗೆ ಹೊಂದುತ್ತದೆ. ನೋಟದ ಮಿತಿ, ನೋಟದಲ್ಲಿ ಇರುವ ಮಾಯೆ, ಸುಳ್ಳನ್ನೇ ನಿಜವೆಂದು ಭ್ರಮಿಸಿರುವುದು



ಎಲ್ಲವೂ ನಮ್ಮ ಕಣ್ಣಿನ, ಮನಸಿನ ಕಾರಣದಿಂದ. ನಮ್ಮ ಕಣ್ಣಕಟ್ಟು ನಾವೇ ಕಳಚಿಕೊಳ್ಳಬೇಕು, ಬೇರೆಯವರು ಅದನ್ನು ನಿವಾರಿಸಲಾಗದು ಎಂದು ಅಮುಗೆ ರಾಯಮ್ಮ ಮತ್ತು ಅಲ್ಲಮ ಪ್ರಭು ಇಬ್ಬರೂ ಹೇಳುತಿದ್ದಾರೆ.

ಕಟ್ಟಿಗೆ ಪದದ ಎರಡನೆಯ ಅರ್ಥವನ್ನು ಸಿದ್ಧರಾಮ ವಚನದಲ್ಲಿ ನೋಡಬಹುದು: ಜನರಿಲ್ಲದ ಘಟ್ಟದೊಳು ಘನವಿಲ್ಲದೊಂದು ಪಟ್ಟಣವಿದೆ ನೋಡಾ/ಪಟ್ಟಣವೊಂದರೊಳು ಮೂರು ಕಟ್ಟಿಗೆಯಿವೆ ನೋಡಾ/ಮೂರರಲ್ಲಿ ಮೂಲೋಕ ಮುಟ್ಟಿ, ಮುಟ್ಟಿ, ಕಪಿಲಸಿದ್ಧ ಮಲ್ಲಿಕಾರ್ಜುನನ ನೆಟ್ಟನೆ ಘಟ್ಟಿಗೊಳ್ಳವು ನೋಡಾ (ಸಂ,೪.ವ೧೭೯). ಮನ, ಬುದ್ಧಿ, ಅಹಂಕಾರಗಳು ಕಲ್ಪಿಸಿಕೊಳ್ಳುವ, ಕಲ್ಪನೆಯ ನಿರ್ಮಾಣಗಳು ಅಥವಾ ಕಟ್ಟು-ಗೆಗಳಾದ ಮೂರು ಲೋಕವನ್ನು ಕುರಿತು ಈ ವಚನ ಹೇಳುವಂತಿದೆ.

ಮೂರನೆಯ ಅರ್ಥ ಕಟ್ಟುಗೆಯ ಇನ್ನೊಂದು ರೂಪವಾಗಿ ಕಟ್ಟಣೆ ಎಂಬ ಬಳಕೆಯಲ್ಲಿದೆ. 'ಇಷ್ಟವ ಹಿಡಿದಲ್ಲಿ ಕ್ರೀ, ಬಿಟ್ಟಲ್ಲಿ ಜ್ಞಾನವೆಂಬ ಕಟ್ಟಣೆವುಂಟೆ (ಮಾದಾರ ಧೂಳಯ್ಯ,, ಸಂ. ೮, ವ. ೧೧೭೯) ಧೂಳಯ್ಯನವರ ಈ ವಚನದಲ್ಲಿ ಕಟ್ಟಣೆ ಎಂಬುದು ಕಟ್ಟಳೆ, ನಿಯಮ ಎಂಬರ್ಥದಲ್ಲಿ ಬಳಕೆಯಾಗಿರಬಹುದು ಎನಿಸುತ್ತದೆ. ಈ ಅರ್ಥ ಮತ್ತಷ್ಟು ಸ್ಪಷ್ಟವಾಗುವುದು ಶಂಕರದಾಸಿಮಯ್ಯನವರ ವಚನದಲ್ಲಿ. ಹಲವು ಬೆಟ್ಟಗಳ ತಪ್ಪಲಿನಲ್ಲಿ ಮೇಯ್ದು ಮತ್ತೆ ತಮ್ಮ ನೆಲೆ ಹೊಲಕ್ಕೆ ತಪ್ಪದೆ ಬರುವ 'ಆ ಪಶುವಿಂಗೆ ಕಟ್ಟುಗೊತ್ತಿಲ್ಲ/ ಕಾವ ಕಟ್ಟಿಗೆ ಒಳಗಲ್ಲ' (ಸಂ,೯. ವ, ೭೬)

ಕಟ್ಟಿಗೆ ಎಂಬ ಮಾತಿಗೆ ನಾಲ್ಕನೆಯ ಅರ್ಥವನ್ನು ಏಲೇಶ್ವರ ಕೇತಯ್ಯ ಮತ್ತು ಹಡಪದ ಅಪ್ಪಣ್ಣಗಳ ಪುಣ್ಯಸ್ತ್ರೀ ಲಿಂಗಮ್ಮನವರ ವಚನಗಳಲ್ಲಿ ಕಾಣುತ್ತವೆ. ಭಾಂಡ ಭಾಜನ ಉಪಕರಣ ವಸ್ತ್ರ ಮುಂತಾದ ಸಕಲದ್ರವ್ಯಂಗಳ/ಮನದಕಟ್ಟಿಂಗೆತಟ್ಟು-ಮುಟ್ಟನರಿತು/ ಅಹುದಾದುದನೊಪ್ಪಿ, ಅಲ್ಲದುದ ಬಿಟ್ಟು,' ಎಂಬ ಏಲೇಶ್ವರ ಕೇತಯ್ಯನವರ ವಚನ ಭಾಗದಲ್ಲಿ (ಸಂ.೬, ವ.೧೭೦೭), ಮತ್ತು ನೆನೆವುತ್ತಿದೆ ಮನ; ದುರ್ವಾಸನೆಗೆ ಹರಿವುತ್ತಿದೆ ಮನ;/ ಕೊನೆಗೊಂಬೆಗೆ ಎಳೆವುತ್ತಿದೆ ಮನ; ಕಟ್ಟಿಗೆ ನಿಲ್ಲದು ಮನ; ಬಿಟ್ಟಡೆ ಹೋಗದು ಮನ. ತನ್ನಿಚ್ಛೆಯಲಾಡುವ ಮನವ ಕಟ್ಟಿಗೆ ತಂದು, ಗೊತ್ತಿಗೆ ನಿಲಿಸಿ,/ಬಚ್ಚ ಬರಿಯ ಬಯಲಿನೊಳಗೆ ಓಲಾಡುವ/ಶರಣರ ಪಾದದಲ್ಲಿ ನಾ ಬೆಚ್ಚಂತಿದ್ದೆನಯ್ಯಾ, ಅಪ್ಪಣ್ಣಪ್ರಿಯ ಚೆನ್ನಬಸವಣ್ಣ' (ಸಂ.೫, ವ.೧೨೪೨) ಎಂಬ ವಚನದಲ್ಲಿ, ಹಾಗೂ 'ಮನವೆಂಬ ಅರಸನ ಹಿಡಿದು, ಕಟ್ಟಿಗೆ ತಂದು, ಗೊತ್ತಿಗೆ ನಿಲಿಸಿ, ಆ ಅರಸನ ಶಕ್ತಿವಿಡಿದು, (ಸಂ.೫, ವ.೧೩೧೦) ಎಂಬ ವಚನ ಭಾಗದಲ್ಲಿ ಕಟ್ಟಿಗೆ ಎಂಬ ಮಾತಿಗೆ ಕಟ್ಟುಪಾಡು, ನಿಯಂತ್ರಣ, ಹತೋಟಿ ಎಂಬ ಅರ್ಥಗಳು ಹೊಂದುತ್ತವೆ. 'ಚಿತ್ತದ ಮತ್ತಮದ ಮಾತಂಗವನ್ನೊತ್ತಿ ಮುರಿ,' ಇಲ್ಲದಿದ್ದರೆ 'ಚಿತ್ತಜನ ಮಾತಂಗ' 'ಕಟ್ಟಿಗೆ ಸಿಕ್ಕದು, ಪ್ರತಿಗಜದೊತ್ತಿಗೆ ಬಾರದು' ಎಂಬ ಸುಂಕದ ಬಂಕಣ್ಣನವರ ಸಾಲುಗಳಲ್ಲೂ (ಸಂ. ೯, ವ. ೭೦೦) ನಿಯಂತ್ರಣ ಅನ್ನುವ ಅರ್ಥವೇ ಕಟ್ಟಿಗೆ ಎಂಬ ಶಬ್ದಕ್ಕೆ ಸೂಕ್ತವೆಂದು ತೋರುತ್ತದೆ.

ಅಂಬಿಗರಚೌಡಯ್ಯನವರ 'ತಟಾಕ ಒಡೆದಡೆ ಕಟ್ಟುವಡೆವುದಲ್ಲದೆ/ ಅಂಬುಧಿತುಂಬಿ ಮೇರೆದಪ್ಪಿದಲ್ಲಿ ಕಟ್ಟಂಗೆ ಹಿಂಗಿ ನಿಂದುದುಂಟೆ?' ಎಂಬ ಪ್ರಶ್ನೆಯಲ್ಲಿ, (ಸಂ, ೬. ವ,

೧೫೨) ಕಟ್ಟಿಂಗೆ–ಕಟ್ಟಿಗೆ ಎಂಬುದು ಅಡೆತಡೆ, ತಡೆಗೋಡೆ, ಏರಿ ಎಂಬರ್ಥದಲ್ಲಿ ಬಳಕೆಯಾಗುವುದು ಕಾಣುತ್ತದೆ. ಅವಸರದ ರೇಕಣ್ಣನವರು ಹೇಳುವ 'ಕ್ರಿಯಾಧರ್ಮಂಗಳಲ್ಲಿ ಆವರ್ಜಿಸಿ ಕಟ್ಟಿಗೆ ತಪ್ಪದಿಪ್ಪುದು ಸದ್ಭಕ್ತಿಸ್ಥಲ' ಎಂಬ ವಾಕ್ಯದಲ್ಲಿ (ಸಂ, ೬. ವ, ೬೭೧) ಕಟ್ಟಿಗೆ ಎಂಬುದು ಕಟ್ಟಳೆ, ನಿಯಮ ಎಂಬರ್ಥದಲ್ಲಿ ಬಳಕೆಯಾಗಿದೆ.

ಇನ್ನುಳಿದ ಸುಮಾರು ಐವತ್ತು ವಚನಗಳಲ್ಲಿ ಕಟ್ಟಿಗೆ ಎಂಬುದು ನಮಗೆಲ್ಲ ಪರಿಚಿತವಾದ 'ಸೌದೆ,' 'ಕಟ್ಟಿಗೆ,' 'ಕೋಲು,' ಎಂಬರ್ಥಗಳಲ್ಲಿ ಬಳಕೆಯಾಗಿದೆ.

ಕಟ್ಟಿಗೆ–ಕಣ್ಣಕಟ್ಟು, ಕಟ್ಟಿಗೆ–ಕಟ್ಟುವಿಕೆ, ನಿರ್ಮಾಣ, ಕಟ್ಟಿಗೆ–ನಿಯಮ, ಕಟ್ಟಳೆ, ಕಟ್ಟಿಗೆ–ಹತೋಟಿ, ನಿಯಂತ್ರಣ, ಕಟ್ಟಿಗೆ–ಒಡ್ಡು, ಕಟ್ಟೆ, ಏರಿ ಎಂಬ ಅರ್ಥಗಳು ಜೊತೆಗೆ ಕಟ್ಟಿಗೆ–ಕೋಲು, ಸೌದೆ, ಕಟ್ಟಿಗೆ ಎಂಬರ್ಥದಲ್ಲಿ ಬಳಕೆಯಾಗಿರುವ ನಿದರ್ಶನಗಳಿವೆ. ವಚನಗಳನ್ನು ಓದುವಾಗ ಸಂಸ್ಕೃತ ಪದಗಳು ಅಷ್ಟು ತೊಂದರೆ ಕೊಡುವುದಿಲ್ಲ, ಸಂಸ್ಕೃತದ ಪಾರಿಭಾಷಿಕಗಳೂ ತೊಡಕಾಗುವುದಿಲ್ಲ. ಅವಕ್ಕೆಲ್ಲ ವಿದ್ವಾಂಸರು ಹಲವು ನಿಘಂಟುಗಳಲ್ಲಿ ವಿವರಣೆ ಹೇಳಿದ್ದಾರೆ. ವಚನಗಳಲ್ಲಿ ಇಂದು ನಾವು ಸಾಮಾನ್ಯವಾಗಿ ಬಳಸದ ರೀತಿಯಲ್ಲಿ ಕನ್ನಡ ಪದಗಳ ಬಳೆಯಿದೆಯಲ್ಲ ಅಲ್ಲಿ ನಿಜವಾದ ತೊಡಕು ಎದುರಾಗುತ್ತದೆ. ವಚನಗಳ ಕನ್ನಡ ಬಳಕೆಯನ್ನು ಕುರಿತೇ ಒಂದು ನಿಘಂಟನ್ನು ತಯಾರಿಸುವ ಅಗತ್ಯ ನಿಜವಾಗಲೂ ಇದೆ.

## ಶ್ರದ್ಧಾಂಜಲಿ



### ಲಿಂ. ಚಂದ್ರಕಾಂತ ಗಲಗಲಿ

ಇಂಡಿ ತಾಲೂಕಿನ ಭತಗುಣಕಿ ಗ್ರಾಮದ ದಿ. ಚಂದ್ರಕಾಂತ ಗಲಗಲಿಯವರು ಅ ಭಾ ಶರಣ ಸಾಹಿತ್ಯ ಪರಿಷತ್ತಿನಲ್ಲಿ ನಾಲ್ಕು ವರ್ಷಗಳಿಂದ ಗೌರವಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿರುವಾಗಲೆ ದಿ.೦೭-೦೫-೨೦೨೧ರಂದು ಲಿಂಗೈಕ್ಯರಾದುದು ಪರಿಷತ್ತಿಗೆ ತುಂಬಲಾರದ ನಷ್ಟವನ್ನುಂಟು ಮಾಡಿದೆ. ಪರಿಷತ್ತು ಮತ್ತು ಕದಳಿ ವೇದಿಕೆಗೂ ಉತ್ತಮ ಮಾರ್ಗದರ್ಶನ ನೀಡಿ, ಪ್ರತಿ ತಿಂಗಳು ನಿಯತಕಾಲಿಕ ಕಾರ್ಯಕ್ರಮಗಳನ್ನು ಮಾಡಲು ಸಹಕಾರ ನೀಡಿ ಕಾರ್ಯನಿರ್ವಹಿಸುತ್ತಿದ್ದರು.

ಲಾಕ್ ಡೌನ್ ಸಮಯದಲ್ಲಿ ಮೂರು ತಿಂಗಳ ಅವಧಿಯಲ್ಲಿ ೮ ದತ್ತಿಗಳನ್ನು ಮಾಡಿ ಜನತೆಗೆ ಪರಿಷತ್ತಿನ ಅರಿವು ಮೂಡಿಸಲು ಪ್ರಯತ್ನಿಸಿದರು. ತಮ್ಮ ಸೇವಾ ಅವಧಿಯಲ್ಲಿ ಆರು ವರ್ಷಗಳ ಕಾಲ ನೌಕರರ ಸಂಘದ ರಾಜ್ಯ ಪರಿಷತ್ ಸದಸ್ಯರಾಗಿ ರಾಜ್ಯ ಸರಕಾರಿ ನಿವೃತ್ತ ನೌಕರರ ಸಂಘದ ತಾಲೂಕು ಅಧ್ಯಕ್ಷರಾಗಿ ೧೨ ವರ್ಷ. ಶಿಕ್ಷಕರ ಪತ್ತಿನ ಸಹಕಾರಿ ಸಂಘದ ನಿರ್ದೇಶಕರಾಗಿ ಮೂರು ವರ್ಷ. ಹೀಗೆ ತಮ್ಮ ಸೇವಾವಧಿಯಲ್ಲಿ ಒಟ್ಟು ೩೮ ವರ್ಷಗಳ ಸೇವೆ ಸಲ್ಲಿಸಿದರು. ಹುಟ್ಟು ಹೋರಾಟಗಾರರಾದ ಇವರು ಉತ್ತಮ ಸಂಘಟಕರಾಗಿದ್ದರು. ಸತ್ಯಸಾಯಿ ಸೇವಾ ಸಮಿತಿ ಇಂಡಿ ತಾಲೂಕು ಸಂಚಾಲಕರಾಗಿ ನೂರಾರು ಹೆಣ್ಣು ಮಕ್ಕಳು ಅಧ್ಯಾತ್ಮಿಕ ಚೈತನ್ಯವನ್ನು ಪಡೆಯಲು ಮಂದಿರವನ್ನು ಕಟ್ಟಿಸಿದರು. ಇನ್ನೂ ಅನೇಕ ಸಮಾಜಮುಖಿ ಕೆಲಸಗಳನ್ನು ಮಾಡಿ ಸಮಾಜದಲ್ಲಿ ತಮ್ಮದೇ ಆದ ಛಾಪು ಮೂಡಿಸಿ ಜನಮನದಲ್ಲಿ ಅಚ್ಚಳಿಯದೆ ಉಳಿದಿದ್ದಾರೆ. ತಂದೆ–ತಾಯಿಗಳ ಹೆಸರಿನಲ್ಲಿ ಪರಿಷತ್ತಿಗೆ ೨೫,೦೦೦ ರೂ. ದತ್ತಿ ದಾನ ನೀಡಿದ್ದಾರೆ. ೭೨ ವರ್ಷ ತುಂಬು ಜೀವನ ನಡೆಸಿದ ಇವರನ್ನು ಕಳೆದುಕೊಂಡ ಪರಿಷತ್ತು ಬಡವಾಗಿದೆ. ಲಿಂಗೈಕ್ಯರಿಗೆ ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ ವೇದಿಕೆಯು ಹೃದಯ ಪೂರ್ವಕವಾಗಿ ಶ್ರದ್ಧಾಂಜಲಿ ಅರ್ಪಿಸುತ್ತದೆ.



## ಒಂದು ವಚನ ~ ಎರಡು ನೋಟ

ಶ್ರೀಮತಿ ಲಲಿತಾ ಕೆ. ಹೊಸಪ್ಯಾಟಿ ಅವರು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಸ್ತುತ ಇವರು ಬೆಂಗಳೂರಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಯಾಗಿದ್ದಾರೆ. ಸೂಕ್ಷ್ಮಗ್ರಾಹಿ ಬರಹಗಳಿಗೆ ಪ್ರಖ್ಯಾತರಾದ ಇವರು ಬರೆದಿರುವ ದ್ರೌಪದಿಯನ್ನು ಕುರಿತ ನಾಟಕವು ಪ್ರಸಿದ್ಧವಾಗಿದೆ. ಕವಿ, ಚಿಂತಕರಾಗಿರುವ ಇವರ ಹಲವು ಕೃತಿಗಳು ಪ್ರಕಟವಾಗಿವೆ.

ಡಾ. ಕೆ.ಆರ್. ಸಿದ್ಧಗಂಗಮ್ಮ ಅವರು ನಿವೃತ್ತ ಕನ್ನಡ ಪ್ರಾಧ್ಯಾಪಕರು, ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸುದೀರ್ಘ ಸೇವೆ ಸಲ್ಲಿಸಿದ್ದಾರೆ. ವಚನ ಸಾಹಿತ್ಯ, ಮಹಿಳಾ ಸಾಹಿತ್ಯ ಇವರ ಆಸಕ್ತಿಯ ಕ್ಷೇತ್ರಗಳಾಗಿವೆ. ಇವರು ಒಂದು ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಹಲವು ಪತ್ರಿಕೆಗಳಲ್ಲಿ ಇವರ ಅಂಕಣ ಬರಹಗಳು ಪ್ರಕಟವಾಗಿವೆ.

ಅರಿವನಾರಡಿಗೊಂಡಿತ್ತು ಮರಹು
ಮರಹನಾರಡಿಗೊಂಡಿತ್ತು ಮಾಯೆ
ಮಾಯೆಯನಾರಡಿಗೊಂಡಿತ್ತು ಕರ್ಮ
ಕರ್ಮವನಾರಡಿಗೊಂಡಿತ್ತು ತನು
ತನುವನಾರಡಿಗೊಂಡಿತ್ತು ಸಂಸಾರ
ಮರಹು ಬಂದಹುದೆಂದರಿದು ಅರಿವ ಬೆಲೆ ಮಾಡಿ ಅರಿವ ಕೊಟ್ಟು
ಗುರುವಿನ ಕೈಯಲ್ಲಿ, ಲಿಂಗವಕೊಂಡೆ ನೋಡಯ್ಯ
ಎನ್ನರಿವನಾಯತದಲ್ಲಿ ನಿಲ್ಲಿಸಿ
ನಿಜ ಸ್ವಾಯತವ ಮಾಡಿದನು
ಕಲಿದೇವರ ದೇವಾ ನಿಮ್ಮ ಶರಣ ಬಸವಣ್ಣ

ಮಡಿವಾಳ ಮಾಚಿದೇವ

## ಪರಿಣಾಮಿಸುವ ನಿಜ ಸ್ವಾಯತದ ಸಂಗ

ಲಲಿತಾ ಕೆ. ಹೊಸಪ್ಯಾಟಿ
ಮಹಾಂತ ನಗರ, ಪೊ.ತಾ.ಹುನಗುಂದ
ಜಿ..ಬಾಗಲಕೋಟೆ ೫೮೭೧೧೮
೯೪೮೦೯ ೯೪೦೯೩

ಗುರುವಾದರೂ ಬಸವಣ್ಣನಿಲ್ಲದೇ ಗುರುವಿಲ್ಲ. ಸುಸಂಗಿಸುವಲ್ಲಿ ಮಹಾಸಂಗಿಸುವಲ್ಲಿ ಅಣ್ಣ ಬಸವಣ್ಣನವರದೇ ನಿಲುವು ಎಂದ ಮಹಾ ಶಿವಶರಣ ಮಡಿವಾಳ ಮಾಚಿದೇವರ ಅಪರೂಪದ ವಚನವಿದು. ನಮ್ಮ ಶರಣರ ಅನುಭಾವಿಕ ಬದುಕಿಗೆ ಪರಿಣಾಮಿಸುವ ಸಂಗತಿಗಳನ್ನು ಕುರಿತು ಸಂದೇಶಗಳನ್ನು ನೀಡುತ್ತಾ ಅನಗತ್ಯ ವಿಷಯ ಸಂಗತಿಗಳಿಗೆ

ಹೆಚ್ಚು ಒತ್ತನ್ನು ಕೊಟ್ಟು, ನಾವೇ ನಮ್ಮ ಉಪಶಮನಕ್ಕಾಗಿ ಮತ್ತೊಂದು ರೀತಿಯಲ್ಲಿ ಅರ್ಥಹೀನ ನಡೆಯಲ್ಲಿ ನಡೆದು ನಿಜ ಜೀವನದ ಸಾರವನ್ನು ತಿಳಿವಲ್ಲಿ ವಿಫಲರಾಗುತ್ತೇವೆ ಎಂಬುದು ಇಡೀ ವಚನದಲ್ಲಿ ಎದ್ದು ಕಾಣುವ ಒಳನೋಟ.

ಶರಣರ ವಚನಗಳನ್ನು ನುಡಿಗಟ್ಟುಗಳನ್ನು ಮೇಲ್ನೋಟಕ್ಕೆ ತಿಳಿದೆವೆಂದು ಪರಾಂಭರಿಸಿಕೊಂಡರೂ ತಿಳಿಯುವುದು ಅಷ್ಟು ಸುಲಭದ ಸಂಗತಿಯಲ್ಲ. ಈ ವಚನದಲ್ಲಿ ಬಳಸಿದ ಪದಗಳು ಸಾಮಾನ್ಯವಾದ ಪದಗಳಲ್ಲ, ಪರಸ್ಪರ ಊರ್ಧ್ವ ಮುಖದಲ್ಲಿ ಚಲನೆಗೊಳ್ಳುವಂತವು, ಎಲ್ಲ ತಿಳಿವಳಿಕೆಯನ್ನು ಪಡೆದುಕೊಂಡಾಯಿತು. ತಿಳಿಯಲು ಏನೂ ಉಳಿದಿಲ್ಲ. ಸಾಧ್ಯವಿರುವ ಎಲ್ಲಾ ದಿಕ್ಕುಗಳಿಂದಲೂ ಜ್ಞಾನ ಮಾರ್ಗಗಳಿಂದಲೂ ಜಾಗೃತ ಜ್ಞೇಯತೆಯಲ್ಲಿ ಪ್ರಜ್ಞೆಯನ್ನು ಹೊಂದಿದೆ ಎಂದಿರುವಾಗ, ಅರಿವು ಅನಂತವಾಗಿದ್ದು ಅರಿವಿನಾಪ್ಯಾಯನ ಇನ್ನೂ ಇದೆ ಎನ್ನುವಾಗಲೇ ಯಾವುದೋ ಒಂದು ಗಳಿಗೆಯಲ್ಲಿ ಮರೆಹು ಎಂಬುದು ಆವರಿಸಿಬಿಡುತ್ತದೆ. ಈ ವಿಸ್ಮೃತಿಯಿಂದಲೇ ಸ್ಮೃತಿ ನಾಶ.

ಈ ಮರೆಹು ಉಂಟಾಗಲು ಪ್ರಮುಖ ಕಾರಣ ನಮ್ಮ ಭ್ರಮೆ, ಈ ಭ್ರಮೆಯೇ ಬೌದ್ಧಿಕ ದುರ್ಬಲತೆ. ಈ ದುರ್ಬಲತೆಗೆ ಕಾರಣ ಸ್ವಾರ್ಥ, ಯಾವಾಗ ಶಾಶ್ವತವಾದ ಅರಿವನ್ನು ಮರೆತು ಅಲ್ಪ ತೃಪ್ತತೆಗೆ ಮರುಳಾಗಿ ಸ್ಮೃತಿಹೀನರಾಗಿ ವಿಸ್ಮೃತಿಯಲ್ಲಿ ಬಿದ್ದು ತನ್ನತನದ ನಾಶಕ್ಕೆ ಕಾರಣವಾಗುತ್ತೇವೆಯೋ ಆಗ ಘನತೆ ಎಂಬುದು ಮರೆಯಾಗುತ್ತದೆ. ಕರ್ಮವೆನ್ನುವುದು ತಾ ಮಾಡಿದ ಕರ್ಮದ ಫಲ. ಸಫಲತೆಯೂ ವಿಫಲತೆಯಲ್ಲಿಯೂ ಪ್ರಭಾವವಿರುತ್ತದೆ. ಹಿಂದೆ ಮಾಡಿದ ಕರ್ಮದ ಫಲ ಮುಂದಿನ ಹೆಜ್ಜೆಗಳಿಗೆ ಪ್ರಭಾವ ಬೀರುವುದು. ಹಾಗೇ ತನುವಿನ ಮೇಲೆ ದಟ್ಟ ಪ್ರಭಾವ ಬೀರುವುದರಿಂದ ತನುವಿನ ವಿಷಯ ಆಸೆಗಳೇ ಕರ್ಮ ಕಮ್ಮಟ ಸಂಗತಿಗಳಿಗೆ ಕಾರಣ. ಸಪ್ತ ಸೂತ್ರಗಳನ್ನು ಹೇಳಿದ ಬಸವಣ್ಣನವರು ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಅನ್ಯರಿಗೆ ಅಸಹ್ಯ ಪಡಬೇಡ ತನ್ನ ಬಣ್ಣಿಸ ಬೇಡ ಇದಿರು ಹಳಿಯಲು ಬೇಡಾ ಎಂದುದು. ಅಹಿಂಸೆ ಅಪಚಾರ ದುರಾಚಾರ ದುರ್ನಡತೆ ದುರ್ವಿಚಾರ ಇವುಗಳೆಲ್ಲ ತನುನಿನಾಸೆಯಿಂದಲೇ ಬರುವುದರಿಂದ ಆಚಾರವೇ ಸ್ವರ್ಗ ಅನಾಚಾರವೇ ನರಕಕ್ಕೆ ಎಂದರು. ಆವರಿಸುವ ಮೋಹ ಮಾಯೆ ಸಂಸಾರ ಬಂಧನದ್ದು. ಈ ಸಂಸಾರದ ವ್ಯಾಮೋಹವನ್ನು ಬಂಧನವನ್ನು ಕಳಚಿಕೊಳ್ಳುವುದೆಂದರೆ ಅನುಭೂತಿ ದರ್ಶನ ಪಡೆಯುವುದು, ಸ್ವಾರ್ಥಕ್ಕಾಕ್ಕೆಡೆಯಿಟ್ಟಲ್ಲಿ ನಡೆ ನುಡಿ ಅಪಚಾರ. ತನ್ನನ್ನೇ ತಾ ಮರೆಯುವುದು ಇಂತಹ ಮರೆಹು ಬಂದೆರಗಿದರೆ ಪ್ರಮಾಣ ಸಿದ್ಧಿ ಸಾಧ್ಯವಿಲ್ಲದಂತಾಗುವುದು. ಮೌಲ್ಯತೆಯನ್ನು ಪಡೆಯಲು ಗುರುವುವಿನ ಕೈಯಲ್ಲಿ ಅರಿವಿನ ಜ್ಞಾನವಿಟ್ಟಾಗ ಪ್ರತಿಸ್ಥಾಪಕತ್ವ ಗುಣ ಬರುವುದು. ಇಂತಹ ಗುಣ ನಮ್ಮದೇನಿಲ್ಲ ಎಲ್ಲಾ ಲಿಂಗಾರ್ಪಿತ ಎಂಬ ಸ್ಥಿತಿಗೆ ಕಾರಣವಾಗುತ್ತದೆ. ಅರಿವನು ಗುರುವಿನ ಕೈಯಲ್ಲಿ ಕೊಡುವುದೆಂದರೆ ಭಕ್ತಿಯಲಿ ಮುಳುಗುವುದು. ಗುರು ದಯಪಾಲಿಸುವುದು ಶಿವಮಯವಾದ ಸತ್ಯದ ಪ್ರತೀಕವಾದ ಮಂಗಲತೆಯ ಸ್ವರೂಪವನ್ನು. ಆತ್ಮ ಸಾಕ್ಷಾತ್ಕಾರವನ್ನು. ಈ ಆತ್ಮ ಸಾಕ್ಷಾತ್ಕಾರ ಪಡೆವ ನಿಟ್ಟಿನಲ್ಲಿ ತನ್ನ ಪರಿಮಿತಿಯನ್ನು ಮೀರಿ ತಾನು ಹಾಕಿಕೊಂಡ ಕಟ್ಟನ್ನು ತೆಗೆದು ಎಲ್ಲೇ ಮೀರಿ ಆಯತವನು ದಾಟಿ ಜಗದಗಲ ಮುಗಿಲಗಲ ಮಿಗೆಯಗಲ



ಜ್ಞಾನಘನ ತಲುಪುವುದು. ಇಂತಹ ಜ್ಞಾನ ಅಖಂಡತೆಯ ಪ್ರತೀಕ. ಆಯತ ಕೂಡಾ ಮಾಯೆಯ ಆಧೀನ. ಆತ್ಮೋನ್ನತಿಯ ಮಾರ್ಗವೆಂದರೆ ನಿಜ ಸ್ವಾಯತ್ತತೆ. ಇದನ್ನು ಪಡೆಯಲು ಅರಿವನ್ನಾವರಿಸುವ ಮರೆಹು, ಮರೆಹು ತಂದ ಮಾಯೆ, ಮಾಯೆಯಿಂದ ಕೂಡಿದ ಕರ್ಮ. ಕರ್ಮದಿಂದ ಎಸೆಗುವ ತನುವಿನ ಅಪಚಾರ, ತನುವಿನ ಸುಖಕ್ಕೆ ಸಂಸಾರ ತಾಪ, ಈ ಬಂಧನಗಳ ಮುಕ್ತತೆಯೇ ಗುರುವಿಂದ ಅಪರಮಿತ ಜ್ಞಾನ ಪಡೆಯುವುದು. ಗುರುವಿನಿಂದ ಲಿಂಗ ಸಂಗಿಯಾಗುವುದು. ಅಕ್ಕಮಹಾದೇವಿ ನೀದೋರಿದ ಬೆಳಕು ಮುಂದೋರಿದ ಕಾರಣ ನಿಮ್ಮಿಂದಲೆ ಅರಿದೆನಯ್ಯ ಎಂದದ್ದು. ಈ ತನ್ನ ತಾ ಅರಿತಾಗಲೇ ನಿಜ ಸ್ವಾಯತ್ತತೆ ದೊರೆಯುವುದೆಂದು ನಂಬಿಯೇ ಮೋಹದ ನೆನಹು ಸುಟ್ಟು ಮುನ್ನೆಡೆದದ್ದು, ಸತ್ಯ ದರ್ಶನ ಗುರುವೆಂಬ ಮಹಾನುಭಾವದ ಸಂಗದಿಂದ ಸಾಧ್ಯ. ನಿಜದರಿವು ತಾಮಸ ಗುಣಗಳ ನಾಶದಿಂದ ಸಾಧ್ಯ, ನೆಚ್ಚಿಕೊಂಡ ಒಂದೊಂದು ಅವಗುಣಗಳನು ತ್ಯಜಿಸಬೇಕೆಂದು ಅರಿವನು ಕೊಟ್ಟ ಬಸವಣ್ಣ ನಿಜ ಸ್ವಾಯತವ ತಿಳಿಸಿದನೆಂದು, ಅವಗುಣ ಪರಿಣಮಿಸಿದರೆ ತನು ಮನ ಪ್ರಾಣ ಶುದ್ಧವಾಗದು ಅದುವೇ ಶರಣರ ಸಂಗ. ಸಮರ್ಪಣ ಭಾವದ ಅನುಭಾವ ಸುಖವೇ ಪರಮ ಸುಖ. ಅದು ಪಡೆದಲ್ಲಿ ಮಹಾನುಭಾವ ಗುಣ ಎಲ್ಲ ಎಲ್ಲೆಯನ್ನು ಮೀರಿದ್ದು ಎಂಬ ನಿಲುವೇ ಘನವಾದುದು. ●

# ಅರುಹು-ಕುರುಹು-ಮರಹು

## ಡಾ. ಕೆ.ಆರ್. ಸಿದ್ಧಗಂಗಮ್ಮ

ಪ್ರಕೃತಿ. ಮನೆ ನಂ.೨೨. ಮೂರನೇ ಕ್ರಾಸ್,
ಭೀಮ ಜ್ಯೋತಿ ಎಲ್ ಐ ಸಿ ಕಾಲೋನಿ
ಬಸವೇಶ್ವರ ನಗರ, ಬೆಂಗಳೂರು ೫೬೦೦೭೯
ಮೊಬೈಲ್ ನಂ ೯೮೪೪೦೫೫೧೪೭

ವಿಜಯಪುರ ಜಿಲ್ಲೆಯ ದೇವರಹಿಪ್ಪರಗಿಯಲ್ಲಿ ಸುಜ್ಞಾನಿ ಮತ್ತು ಪರ್ವತಪ್ಪನ ಮಗನಾಗಿ ಜನಿಸಿದ ಮಾಚಿದೇವ ಹನ್ನೆರಡನೇ ಶತಮಾನದಲ್ಲಿ ಬಸವಾದಿ ಶರಣರು ಕಟ್ಟಿದ ಕಲ್ಯಾಣದ ಭಾಗವಾಗಿದ್ದರು. ಕಲ್ಯಾಣದಲ್ಲಿ ಬಿಜ್ಜಳನ ಸೈನಿಕರು ಮತ್ತು ಶರಣರ ನಡುವೆ ನಡೆದ ಗದ್ದಲದಲ್ಲಿ ವೀರಗಣಾಚಾರಿಯಾಗಿ ಶರಣಸಾಹಿತ್ಯ ರಕ್ಷಿಸಲು ಕಂಕಣ ತೊಟ್ಟವರು. ಕಲ್ಯಾಣದ ಕ್ರಾಂತಿಯ ನಂತರ ಚೆನ್ನಬಸವಣ್ಣನವರ ಮಾರ್ಗದರ್ಶನದಲ್ಲಿ ವಚನಗಳ ಹಸ್ತಪ್ರತಿಗಳನ್ನು ರಕ್ಷಿಸುತ್ತ ಉಳವಿಯ ಕಡೆ ಹೊರಟವರು. ಆ ಹಾದಿಯಲ್ಲಿ ಬೆಳಗಾವಿಯಿಂದ ಮುಂದೆ ಸಾಗುವಾಗ ಮಲಪ್ರಭಾ ನದಿಯ ಬಳಿ ಬಿಜ್ಜಳನ ಸೈನಿಕರಿಗೂ ಶರಣರಿಗೂ ಹೋರಾಟವಾಗುತ್ತದೆ. ಅದೇ ಈಗಿನ ಕಾದರವಳ್ಳಿ ಎಂದು ಇತಿಹಾಸ ಹೇಳುತ್ತದೆ.

ಮಡಿವಾಳ ಮಾಚಿದೇವರು ೫೧೨ಕ್ಕೂ ಮಿಕ್ಕ ವಚನಗಳನ್ನು ರಚಿಸಿದ್ದಾರೆ ಇವರ ಅನೇಕ ವಚನಗಳಲ್ಲಿ ಬಸವಣ್ಣನ ವ್ಯಕ್ತಿತ್ವದ ಪರಿಚಯವಾಗುತ್ತದೆ. ಬಸವಾದಿ ಶರಣರು ಕಟ್ಟಿದ ಸಮಾನತೆಯ ಸಮಾಜದ ಮೌಲ್ಯಗಳು ವಚನಗಳಲ್ಲಿ ಕಂಡು ಬರುತ್ತವೆ.

ಮಾಚಿದೇವರು ತಮ್ಮ ವಚನಗಳಲ್ಲಿ ಹೇಳಿರುವ ಅರುಹು ಕುರುಹು ಮತ್ತು ಮರಹು

ಇವುಗಳ ಸಂಬಂಧದ ಕುರಿತಾಗಿ ಹೇಳಿರುವ ಎರಡು ವಚನಗಳ ಕುರಿತು ಒಂದಿಷ್ಟು ವಿಚಾರಗಳು ಇಲ್ಲಿವೆ.

ಅರಿವು ಅಂದರೆ ಜ್ಞಾನ ದ ಮಹಾಶಕ್ತಿಯನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿದೆ.

**ಅರುಹಿನೊಳಗಣ ಕುರುಹು ಮರೆಹಿಂಗೆ ಬೀಜ**
**ಕುರುಹು ಮರಹ ಅರಿವು ನುಂಗಿ**
**ಘನಕ್ಕೆ ಘನವೇದ್ಯವಾದ ಬಳಿಕ ನಿತ್ಯ ಪರಿಪೂರ್ಣ**
**ತಾನೆ ಕಲಿದೇವರ ದೇವನು ವಾಙ್ಮನಕ್ಕ ಗೋಚರನು.**

ಅರಿವು ಇದನ್ನು ಪಡೆಯಲು ಕುರುಹು ಬೇಕು ನಿಜ. ಆದರೇನು ನಾವು ಮತ್ತೆ ಈ ಜಂಜಡ ಲೋಕಕ್ಕೆ ಬೀಳಲು ಈ ಕುರುಹೇ ಬೀಜವಾಗುತ್ತದೆ. ಈ ಕುರುಹು ಇಲ್ಲದೆ ಅರಿವು ಸಿಗದು. ಆದರೆ ಕುರುಹೇ ಎಲ್ಲವೂ ಅಲ್ಲ. ಈ ಕುರುಹು ನಮ್ಮ ಮರೆವಿಗೂ ಕಾರಣವಾಗುತ್ತದೆ. ಈ ಕುರುಹು ಎಂಬುದರ ಅಧಿಪತ್ಯವನ್ನು ಅರಿವು ನುಂಗಿದಾಗ ಮಾತ್ರ ಘನವೇದ್ಯವಾಗಿ ನಿತ್ಯ ಪರಿಪೂರ್ಣತೆಯತ್ತ ಸಾಗಲು ಸಾಧ್ಯ. ಈ ನಡೆಯ ಗುರಿ ಅಗಮ್ಯ ಅಗೋಚರ ವಾದುದು. ಈ ಅನುಭವವು ಶಬ್ಧಕ್ಕೆ ಅತೀತವಾದುದು.

ಮಾಚಿದೇವರ ಇನ್ನೊಂದು ಅಪರೂಪದ ವಚನ ಈ ವಿಚಾರವನ್ನು ಇನ್ನಷ್ಟು ಬೆಳೆಸುತ್ತದೆ.

**ಅರಿವನಾರಡಿಗೊಂಡಿತ್ತು ಮರಹು**
**ಮರಹನಾರಡಿಗೊಂಡಿತ್ತು ಮಾಯೆ**
**ಮಾಯೆಯನಾರಡಿಗೊಂಡಿತ್ತು ಕರ್ಮ**
**ಕರ್ಮವನಾರಡಿಗೊಂದಡಿ ತ್ತು ತನು**
**ತನುವನಾರಡಿಗೊಂಡಿತ್ತು ಸಂಸಾರ**
**ಮರಹುಬಂದಹುದೆಂದರಿದು**
**ಅರಿವ ಬೆಲೆ ಮಾಡಿ ಅರಿವ ಕೊಟ್ಟು**
**ಗುರುವಿನ ಕೈಯಲ್ಲಿ ಲಿಂಗವ ಕೊಂಡೆ ನೋಡಯ್ಯ**
**ಎನ್ನರಿವನಾಯತದಲ್ಲಿ ನಿಲ್ಲಿಸಿ**
**ನಿಜ ಸ್ವಾಯತವ ಮಾಡಿದನು**
**ಕಲಿದೇವರದೇವ, ನಿಮ್ಮ ಶರಣ ಬಸವಣ್ಣ.**

ಅರಿವಿನ ಪ್ರಾಮುಖ್ಯತೆಯನ್ನು ಧ್ವನಿಸುವ ವಚನವಿದು. ಅರಿವು –ಮರಹು ಇವು ವಿರುದ್ಧ ಪದಗಳಲ್ಲ ಅಥವಾ ಭಾವಗಳು ಅಲ್ಲ. ಇವೆರಡೂ ಒಂದು ರೀತಿಯ ಶಕ್ತಿಗಳು. ಇವು ಒಂದನ್ನೊಂದು ಆವರಿಸಿ ನುಂಗುವ ಒಂದಾಗುವ ಪ್ರಕ್ರಿಯೆಯ ಒಳಗೆ ಸಿಲುಕಿದ ಮಾನವನ ಹೋರಾಟವಿಲ್ಲಿದೆ. ಈ ವಚನ ಆಳದಲ್ಲಿ ಶರಣನ ತಲ್ಲಣ ಒಳ ತುಮುಲಗಳ ಕಥನವೂ ಆಗಿದೆ.

ಇನ್ನಷ್ಟು ವಿವರಿಸುವುದಾದರೆ ಮರಹು ಇಲ್ಲದೆ ಅರಿವಿಲ್ಲ, ಮಾಯೆ ಇಲ್ಲದೆ ಮರಹು ಇಲ್ಲ, ಕರ್ಮ ವಿಲ್ಲದೆ ಮಾಯೆ ಇಲ್ಲ, ತನುವಿಲ್ಲದೆ ಕರ್ಮವಿಲ್ಲ, ಸಂಸಾರವಿಲ್ಲದೆ ತನುವಿಲ್ಲ,



ಎಲ್ಲಕ್ಕಿಂತ ದೊಡ್ಡದು ಮರಹು. ಈ ಮರೆವನ್ನು ನುಂಗಲು ಅದಕ್ಕಿಂತ ದೊಡ್ಡ ಶಕ್ತಿಯಾದ ಅರಿವಿನಿಂದ ಮಾತ್ರ ಸಾಧ್ಯ. ಆ ಅರಿವು ಜ್ಞಾನವಿರುವುದು ನನ್ನೊಳಗೆ. ಅರಿವೇ ಗುರು. ಇದನ್ನು ಕಂಡುಕೊಳ್ಳಲು ಶರಣ ಗುರುವಿನ ಮೊರೆ ಹೋಗಿದ್ದಾನೆ. ಆ ಗುರು ಬೇರಾರು ಅಲ್ಲ. ತನ್ನೊಳಗಿನ ಅರಿವೇ ಗುರು ಎಂದರಿತು ಆ ಅರಿವನ್ನು ಅಂದರೆ ಜ್ಞಾನವನ್ನು ಜ್ಞಾನದಿಂದಲೇ ಪಡೆದ ಶರಣ ಇಲ್ಲಿದ್ದಾನೆ. ಈ ಅರಿವನ್ನು ಪಡೆಯಲು ಗುರುವಿನಿಂದ ಲಿಂಗವನು ಕೊಂಡೆ, ಪಡೆದೆ ಎನ್ನುವಾಗ ಶರಣನ ಶ್ರದ್ಧೆ ನಿಷ್ಠೆ ಶ್ರಮಗಳು ಎದ್ದು ಕಾಣುತ್ತವೆ. 'ಅರಿವ ಬೆಲೆ ಮಾಡಿ ಅರಿವ ಕೊಟ್ಟು ಗುರುವಿನ ಕೈಯಲ್ಲಿ ಲಿಂಗವ ಕೊಂಡೆ ನೋಡಯ್ಯ' ಎಂದರೂ ಈ ಲಿಂಗವು ಕುರುಹು ಮಾತ್ರ. ಕುರುಹು ಬೇಕು ಆದರೆ ಅದೇ ಅಂತಿಮ ವಲ್ಲ. ಈ ಸಂಕೇತವನ್ನು ದಾಟುವುದು ಶರಣನ ಗುರಿ. ಗುರುವೇ ಗುರಿಯಲ್ಲ. ಅಥವಾ ಗುರು ಕೊಟ್ಟ ಲಿಂಗವು ಗುರಿಯಲ್ಲ. ಇವೆಲ್ಲವುಗಳ ಮನ ಮುಟ್ಟಿ ತಟ್ಟಿ ಗಟ್ಟಿಯಾಗಿ ಅವುಗಳ ಆಚೆ ಶರಣ ಸಾಗಬೇಕಾಗಿದೆ. ಈ ಸಾಗುವಿಕೆ ಅವನಿಗೆ ಅನಿವಾರ್ಯ. ಆತ ನಿಲ್ಲಲಾರ. ಈಗವನ ಜೊತೆಗಿರುವುದು ಅವನು ಕಂಡುಕೊಂಡ ಅರಿವು ಮಾತ್ರ. ಈ ಅರಿವಿಗೆ ದಾರಿ ತೋರಿದ ಬಸವಣ್ಣನನ್ನು ಮಾಚಿದೇವ ನೆನೆಯುತ್ತಾನೆ ಇಲ್ಲಿ ಅರಿವೇ ಗುರುವಾಗಿ ಗುರು –ಲಿಂಗ ಎಂಬುದೆಲ್ಲ ಕುರುಹು ಆಗಿ ನಿಜ ಸಾಕ್ಷಾತ್ಕಾರ ಪಡೆದ ಶರಣ ಇಲ್ಲಿದ್ದಾನೆ.

ಬೆಳಕೊಂದು ಮತ್ತೆ ಮತ್ತೆ ಬೆಳಕನ್ನು ಹೆರುವಂತೆ ಬೆಳಗಿದ ಬೆಳಕಿನ ದಿವಟಿಗೆ ಬೆಳೆಯುತ್ತಲೇ ಹೋಗುತ್ತದೆ. ವಚನಗಳಿಗೆ ಇರುವ ದೊಡ್ಡ ಶಕ್ತಿ ಇದು.

●

**ಅಂಜಿದಡೆ ಮಾಣದು**
**ಅಳುಕಿದಡೆ ಮಾಣದು**
**ವಜ್ರಪಂಜರದೊಳಗಿದ್ದಡೆ ಮಾಣದು**
**ತಪ್ಪದುವೋ ಲಲಾಟಲಿಖಿತ**
**ಕಕ್ಕುಲತೆಗೆ ಬಂದಡೆ ಆಗದು ನೋಡಾ**
**ಧೃತಿಗೆಟ್ಟು ಮನ ಧಾತುಗೆಟ್ಟಡೆ**
**ಅಪ್ಪುದು ತಪ್ಪದು ಕೂಡಲಸಂಗಮದೇವಾ**



# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಡಾ. ವಸುಂಧರಾ ಭೂಪತಿ**

*ನಂ. ೨೨೨, ೨ನೇ ಇ ಅಡ್ಡರಸ್ತೆ, ೩ನೆ ಬ್ಲಾಕ್*
*೩ನೆ ಹಂತ, ಬಸವೇಶ್ವರ ನಗರ,*
*ಬೇಗೂರು-೫೬೦ ೦೭೯*
*ಮೊ: ೯೯೮೬೮೮ ೪೦೪೭೭*

**ಡಾ. ವಸುಂಧರಾ ಭೂಪತಿ ಅವರು ವೈದ್ಯೆಯಾಗಿ, ಸಾಹಿತಿಯಾಗಿ, ಸಂಘಟಕಿಯಾಗಿ ಹೋರಾಟಗಾರ್ತಿಯಾಗಿ ಹೆಸರಾಗಿದ್ದಾರೆ. ವೈದ್ಯಕೀಯ ಸಾಹಿತ್ಯ, ಕಥೆ, ಕವನ, ನಾಟಕ, ಗ್ರಂಥ ಸಂಪಾದನೆ ಸೇರಿದಂತೆ ೬೦ಕ್ಕೂ ಹೆಚ್ಚು ಕೃತಿಗಳು ಪ್ರಕಟಗೊಂಡಿವೆ. ಇವರು ರಚಿಸಿದ ಅನೇಕ ಲೇಖನಗಳು ಕನ್ನಡ ನಾಡಿನ ವಿವಿಧ ವಿಶ್ವವಿದ್ಯಾಲಯಗಳ ಪದವಿ ತರಗತಿಗಳಿಗೆ ಪಠ್ಯವಾಗಿವೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ, ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ ಅಧ್ಯಕ್ಷೆಯಾಗಿ, ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆಯಾಗಿ, ಕರ್ನಾಟಕ ಸರ್ಕಾರದ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷೆಯಾಗಿ ಅನೇಕ ಉತ್ತಮ ಯೋಜನೆಗಳನ್ನು ರೂಪಿಸಿದ್ದಾರೆ.**

**'ಕರ್ನಾಟಕ ರಾಜ್ಯ ಪರಿಸರ' ಪ್ರಶಸ್ತಿ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ 'ಶ್ರೇಷ್ಠ ವಿಜ್ಞಾನ ಸಂವಹನಕಾರ ರಾಜ್ಯ' ಪ್ರಶಸ್ತಿ ಸೇರಿದಂತೆ ಹಲವಾರು ಪ್ರಶಸ್ತಿಗಳಿಗೆ ಪುರಸ್ಕೃತರಾಗಿದ್ದಾರೆ.**

**ಜಪಾನ್, ಚೈನಾ, ಅಮೇರಿಕಾ, ಅಬುದಾಬಿ, ಬಹೇರಿಯನ್ ಸೇರಿದಂತೆ ವಿವಿಧ ದೇಶಗಳ ಅಂತರಾಷ್ಟ್ರೀಯ ಸಮ್ಮೇಳನಗಳಲ್ಲಿ ಪಾಲ್ಗೊಂಡಿದ್ದಾರೆ.**

**೧. ಶರಣ ಚಳುವಳಿಯ ಹಿನ್ನೆಲೆಯನ್ನು ನೀವು ಗ್ರಹಿಸುವ ಮತ್ತು ಅರ್ಥೈಸುವ ಬಗೆಯನ್ನು ಕುರಿತು ಹೇಳಿ:**

**ಉತ್ತರ:** ಶ್ರಮಜೀವಿಗಳ ಚಳುವಳಿ, ಚಾತುರ್ವರ್ಣ ವ್ಯವಸ್ಥೆಯ ವಿರುದ್ಧ ಸಿಡಿದು ನಿಂತ ಚಳುವಳಿ. ಆ ಕಾರಣದಿಂದಲೇ ಶ್ರಮಜೀವಿಗಳೆಲ್ಲ ಜಾತಿ ಹೆಸರಿನಲ್ಲಿ ಅವಮಾನಕ್ಕೊಳಗಾದವರೆಲ್ಲ ಒಂದಾಗಿ ನಡೆಸಿದ ಚಳುವಳಿ.

**೨. ಶರಣರ ಸಮುದಾಯದ ಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೆ?**

ಉತ್ತರ: ಶರಣರ ಸಮಸಮಾಜದ ನಿರ್ಮಾಣ–ಜಾತಿಭೇದವಿಲ್ಲದ ಆರ್ಥಿಕ ತಾರತಮ್ಯವಿಲ್ಲದ ಕಲ್ಯಾಣ ರಾಜ್ಯದ ಕಲ್ಪನೆ. ಎಲ್ಲರನ್ನೂ ಒಳಗೊಳ್ಳುವುದು, ಯಾರನ್ನೂ ಮೇಲು–ಕೀಳು ಎಂದು ಗಣಿಸದೇ ಇರುವುದು. ಇದರ ಜೊತೆಗೆ ಕಾಯಕ, ದಾಸೋಹ ಮತ್ತು ಆ ಮೂಲಕ ಸಮಾನತೆ ಸಾಧಿಸುವುದು. ಸಮಾಜಮುಖಿಯಾದ ಯಾವುದೇ ಕಾಯಕವೂ ಕೂಡ ಸತ್ಯಶುದ್ಧ ಕಾಯಕ.



**೩. ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು ಎಂದು ನಿಮಗನಿಸುತ್ತದೆಯೆ?**

**ಉತ್ತರ:** ಲಿಂಗನ್ಯಾಯದ ಪರಿಕಲ್ಪನೆ ಸ್ಪಷ್ಟವಾಗಿ ಬೇರೂರಿತ್ತು ಎಂಬುದಕ್ಕೆ ಅನೇಕ ವಚನಗಳ ನಿದರ್ಶನ ಸಿಗುತ್ತದೆ. ದೇವರ ದಾಸಿಮಯ್ಯನ ವಚನ

**ಮೊಲೆಮುಡಿ ಬಂದರೆ ಹೆಣ್ಣೆಂಬರು!**
**ಗಡ್ಡ ಮೀಸೆ ಇದ್ದಡೆ ಗಂಡೆಂಬರು**
**ನಡುವೆ ಸುಳಿವಾತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ**
**ಕಾಣಾ ರಾಮನಾಥ!**

**ಗಂಡು ಗಂಡಾದೆಡೆ ಹೆಣ್ಣಿನ ಸೂತಕ**
**ಹೆಣ್ಣು ಹೆಣ್ಣಾದೆಡೆ ಗಂಡಿನ ಸೂತಕ**
**ಮನದ ಸೂತಕ ಹಿಂಗಿದೆಡೆ**
**ತನುವಿನ ಸೂತಕಕ್ಕೆ ತೆರಹುಂಟೆ**
**ಮುನ್ನಿಲ್ಲದ ಸೂತಕಕ್ಕೆ ಜನ ಮರುಳಾಯಿತ್ತು**
**ನೋಡಾ ಚೆನ್ನಮಲ್ಲಿಕಾರ್ಜುನ**

ಕನ್ನಡದ ಪ್ರಥಮ ಕವಯತ್ರಿ ಅಕ್ಕಮಹಾದೇವಿಯ ವಚನವಾಗಿದೆ. ಇಲ್ಲಿ ಅವಳು ಗಂಡು ಹೆಣ್ಣು ಎರಡು ಜೀವಿಗಳ ಜೈವಿಕ ಲಕ್ಷಣ ಕುರಿತು ಹೇಳುತ್ತಾಳೆ. ಗಂಡು–ಹೆಣ್ಣು ಎಂಬ ಭೇದವು ಮನಸ್ಸಿಗೆ ಅಂಟಿದ ಮೈಲಿಗೆಯಾಗಿದೆಯೇ ಹೊರತು ನಿಸರ್ಗಜನ್ಯ ತಾರತಮ್ಯವಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಸೃಷ್ಟಿಯ ನಿರಂತರ ಚಲನೆಗಾಗಿ ಹೆಣ್ಣು–ಗಂಡು ಎಂಬ ಲಿಂಗವೈವಿಧ್ಯ ಅತ್ಯಂತ ಅವಶ್ಯ ಮತ್ತು ಅನಿವಾರ್ಯ.

ಆದ್ದರಿಂದ ಎಲ್ಲ ಬಗೆಯ ಶಕ್ತಿ ಸಂಚಲನೆಗೆ ಧನಾತ್ಮಕ ಋಣಾತ್ಮಕ ಎಂಬ ಅಂಶಗಳು ಬೇಕೇ ಬೇಕು. ಆದ್ದರಿಂದಲೆ ಸೃಷ್ಟಿಯ ಎಲ್ಲ ಪಶು, ಪಕ್ಷಿ, ಪ್ರಾಣಿ ಮುಂತಾದ ಜೀವರಾಶಿಗಳಲ್ಲಿ ಉಭಯಲಿಂಗಿಗಳು ಅಸ್ತಿತ್ವದಲ್ಲಿದೆ.

ಅಕ್ಕಮಹಾದೇವಿಯೇ ಮತ್ತೆ ಹೀಗೆ ನುಡಿದಿದ್ದಾಳೆ

**ಪುರುಷನ ಮುಂದೆ ಸ್ತ್ರೀ ಎಂಬ**
**ಅಭಿಮಾನವಾಗಿ ಕಾಡಿತ್ತು ಮಾಯೆ**
**ಸ್ತ್ರೀಯ ಮುಂದೆ ಪುರುಷನೆಂಬ**
**ಅಭಿಮಾನವಾಗಿ ಕಾಡಿತ್ತು ಮಾಯೆ**

ಎಂದು ಪರಸ್ಪರ ಶಕ್ತಿಸಾಧನೆಯನ್ನು ನೈಸರ್ಗಿಕ ನೆಲೆಯಲ್ಲಿ ಒಪ್ಪಿಸುತ್ತಾಳೆ. ಇದೇ ಅವಧಿಯಲ್ಲಿ ಬಸವಣ್ಣನ ಪತ್ನಿಯರಾದ ನೀಲಾಂಬಿಕೆ, ಗಂಗಾಂಬಿಕೆ, ಅಜಗಣ್ಣನ ತಂಗಿ, ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಮ್ಮ, ಸೂಳೆ ಸಂಕವ್ವೆ, ಕಸಗುಡಿಸುವ ಸತ್ಯಕ್ಕ, ದಲಿತರ ಕಾಳವ್ವೆ, ಗೊಗ್ಗವ್ವೆ, ಬೊಂತಾದೇವಿ ಮುಂತಾದ ೩೦ಕ್ಕೂ ಹೆಚ್ಚು ಮಹಿಳೆಯರು ವಚನಗಳನ್ನು ರಚಿಸಿದ್ದಾರೆ.

ಪುರುಷರ ಸಮಾನವಾಗಿ ಅನುಭವ ಮಂಟಪದಲ್ಲಿ ಕುಳಿತು ತಮ್ಮ ಬದುಕುವ

ಹಕ್ಕಿನ ಕುರಿತು ಮಾತನಾಡಿದ್ದಾರೆ. ಕೆಲವು ವಚನಕಾರ್ತಿಯರಂತೂ ತೀರಾ ಮೂಲಭೂತ ಪ್ರಶ್ನೆಯನ್ನೆತ್ತಿ ದಂಗುಬಡಿಸಿದ್ದಾರೆ. ಗೊಗ್ಗವ್ವೆ ಲೈಂಗಿಕ ಸ್ವಾತಂತ್ರ್ಯದ ಬಗ್ಗೆ ಮಾತನಾಡಿ ಹೀಗೆ ಹೇಳುತ್ತಾಳೆ.

**ಗಂಡು ಮೋಹಿಸಿ ಹೆಣ್ಣು ಹಿಡಿದಡೆ**
**ಅದು ಒಬ್ಬರ ಒಡವೆ ಎಂದರಿಯಬೇಕು**
**ಹೆಣ್ಣು ಮೋಹಿಸಿ ಗಂಡ ಹಿಡಿದಡೆ**
**ಉತ್ತರವಾವುವೆಂದರಿಯಬೇಕು.**

ಇದರರ್ಥ ಗಂಡಸರು ಹೆಣ್ಣನ್ನು ಮೋಹಿಸಿ ಅವರನ್ನು ತಮ್ಮ ಬಯಕೆಗೆ ಬಳಸಿಕೊಂಡರೆ ಅದಕ್ಕೆ ಸಮ್ಮತಿಸುವ ಸಮಾಜ ಅದೇ ಕೆಲಸ ಸ್ತ್ರೀಯರು ಮಾಡಿದರೆ ಶಿಕ್ಷಿಸುವುದೇಕೆ? ಎಂದು ತಾರ್ಕಿಕ ಪ್ರಶ್ನೆ ಎತ್ತುತ್ತಾಳೆ. ಲೈಂಗಿಕ ಮಡಿವಂತಿಕೆ ಸ್ತ್ರೀಯರಿಗೆ ಮಾತ್ರ ಮೀಸಲು. ಪುರುಷನಿಗೆ ಏಕೆ ಈ ವಿಷಯದಲ್ಲಿ ನಿರ್ಬಂಧವಿಲ್ಲ. ಅವನು ಮುಕ್ತವಾಗಿ ಅವನ ಲೈಂಗಿಕ ಬಯಕೆಗಳನ್ನು ತೀರಿಸಿಕೊಳ್ಳಬಹುದು. ಅದು ಅವನ ಹಕ್ಕು. ಆದರೆ ಮಹಿಳೆಯರಿಗೆ ಈ ಹಕ್ಕು ಇಲ್ಲ. ಮದುವೆಗೆ ಮುಂಚಿನ ಲೈಂಗಿಕ ಬದುಕು ಅವಳಿಗೆ ವರ್ಜ್ಯ. ಹಾಗೇನಾದರೂ ಆದರೆ ಆಕೆಯನ್ನು ಕುಲಟಿ, ಜಾರಿಣಿ, ಶೀಲಗೆಟ್ಟವಳು ಅಂತ ಜರಿದಿದ್ದಾರೆ. ಗೊಗ್ಗವ್ವೆ ಈ ಅನ್ಯಾಯವನ್ನು ಪ್ರತಿಭಟಿಸುತ್ತಾಳೆ. ಲೈಂಗಿಕ ಬದುಕು ಪುರುಷರಿಗೊಂದು, ಸ್ತ್ರೀಯರಿಗೊಂದು ನಿಯಮ ಸಲ್ಲದು ಎನ್ನುತ್ತಾಳೆ.

ಆಯ್ದಕ್ಕಿ ಲಕ್ಕಮ್ಮನಂತೂ ಕುಟುಂಬ ಒಡ್ಡಿದ ನಿರ್ಬಂಧನೆಗಳನ್ನು ಕುರಿತು ಪ್ರಶ್ನಿಸುತ್ತಾಳೆ.

**ಆವ ಬೀಜ ಮೊಳೆಯುವಲ್ಲಿ**
**ಹಿಂಚು ಮಂಚುಂಟೆ**
**ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ**
**ಅರಿವಿಗೆ ಬೇರೊಂದು ಒಡಲುಂಟೆ**

ಎಂದು ಕೇಳುತ್ತಾಳೆ. ಈ ವಚನ ತುಂಬ ಸ್ಪಷ್ಟವಾಗಿ ಗಂಡ-ಹೆಂಡತಿ ದಾಂಪತ್ಯ ಸಂಬಂಧದ ವ್ಯಾಪ್ತಿಯನ್ನು ಕುರಿತು ಮಾತನಾಡುತ್ತದೆ. ಬೀಜ ಮೊಳೆಯಬೇಕಾದರೆ ಬೀಜದ ಮೇಲ್ಭಾಗ ಮೊದಲು ಬೀಜದ ಕೆಳಭಾಗ ಹಿಂದೆ ಇರುತ್ತವೆ. ಹೀಗಿರುವುದು ನಿಸರ್ಗದ ನಿಯಮ. ಪುರುಷ, ಸ್ತ್ರೀ ಪರಸ್ಪರ ಮಿಲನದಲ್ಲಿ ಸಂತಾನ ಅಂಕುರಿಸುತ್ತದೆ. ಪುರುಷನಿಂದ ವೀರ್ಯಾಣು ಪಡೆದು ಸ್ತ್ರೀ ಗರ್ಭ ಧರಿಸುತ್ತಾಳೆ. ಇದೆ ಗರ್ಭ ತಳೆದು ಮಗುವಾಗಿ ಭೂಮಿಗೆ ಬರುತ್ತದೆ. ಇದೊಂದು ನೈಸರ್ಗಿಕ ಪ್ರತಿಕ್ರಿಯೆ. ಈ ಪ್ರಕ್ರಿಯೆಯಲ್ಲಿ ಸ್ತ್ರೀಪುರುಷರಿಬ್ಬರಿಗೂ ಪ್ರಕೃತಿ ಭಿನ್ನ ಪಾತ್ರ ನೀಡಿದೆ. ಈ ದಾಂಪತ್ಯ ಸಹಜ ಸಮಾನ. ಇದರಲ್ಲಿ ಯಾರೂ ಮೇಲಲ್ಲ, ಯಾರೂ ಕೀಳಲ್ಲ. ಯಾರ ಪಾತ್ರವೂ ಕಡಿಮೆ ಹೆಚ್ಚು ಅಲ್ಲ. ಸಂತಾನ ಸೃಷ್ಟಿಯಲ್ಲಿ ಪುರುಷನ ಪಾತ್ರಗಳು ಎಂದಾಗಲೀ ಅಥವಾ ಅದು ಸ್ತ್ರೀಯರ ಕರ್ಮ ಎಂದಾಗಲೀ ಅಲ್ಲ. ಸಂತಾನಕ್ಕಾಗಿ ಅವರು ಸತಿ-ಪತಿಗಳೆಂಬ ಅಭಿದಾನ ಕರ್ತವ್ಯ ಪಾಲಿಸುತ್ತಿರಬೇಕು. ಅಷ್ಟೇ ಹೊರತು ಪತಿ ಎಂದರೆ ಶ್ರೇಷ್ಠ. ಅವನು ಮನಬಂದಂತೆ ನಡೆದುಕೊಳ್ಳಬಹುದು ಎಂದಲ್ಲ. ಪುರುಷ ಎಂಬ ಕಾರಣಕ್ಕಾಗಿಯೇ ಅವನು ಸ್ತ್ರೀಯನ್ನು



ಯಾವುದೇ ರೀತಿಯಲ್ಲಿ ಶೋಷಿಸಲಾಗದು. ಹೀಗೆ ಶೋಷಿಸುವುದು ಸ್ತ್ರೀಯರು ಒಪ್ಪಿಕೊಳ್ಳಲಾರರು ಎಂದು ಆಯ್ದಕ್ಕಿ ಲಕ್ಕಮ್ಮ ಪ್ರತಿಭಟಿಸುತ್ತಾಳೆ.

ಸ್ತ್ರೀ ಪುರುಷ ಎಂಬ ಭೇದವಿಲ್ಲದು ಎಂಬುದಕ್ಕೆ ಕಸಗುಡಿಸುವ ಕಾಯಕದ ಸತ್ಯಕ್ಕನ ವಚನ

**ಮೊಲೆ ಮುಡಿ ಇದ್ದುದೇ ಹೆಣ್ಣೆಂದು ಪ್ರಮಾಣಿಸಲಲ್ಲ**
**ಕಾಸೆ ಮೀಸೆ ಕಠಾರೆ ಇದ್ದುದೇ ಗಂಡೆಂದು ಪ್ರಮಾಣಿಸಲಲ್ಲ**
**ಅದು ಜಗದ ಹಾಹೆ, ಬಲ್ಲವರ ನೀತಿಯಲ್ಲ**
**ಏತರ ಹಣ್ಣಾದರೂ ಮಧುರವೇ ಕಾರಣ**
**ಅಂದವಿಲ್ಲದ ಕುಸುಮಕ್ಕೆ ವಾಸನೆಯೇ ಕಾರಣ**
**ಇದರಂದವ ನೀನೇ ಬಲ್ಲೆ ಶಂಭುಜಕ್ಕೇಶ್ವರಾ!"**

ಹೆಣ್ಣು ತನ ಗಂಡು ತನಗಳು ಸೃಷ್ಟಿಯ ವೈರುಧ್ಯವೇ ಹೊರತು ಅಭೇದವಲ್ಲ. ಹೀಗೆ ಶರಣ-ಶರಣೆಯರು ಮಹಿಳೆಯನ್ನು ಸಮಾನವಾಗಿ ಕಂಡಿದ್ದಾರೆ, ಗೌರವಿಸಿದ್ದಾರೆ. ಅಷ್ಟೇ ಅಲ್ಲ ಅನುಭವ ಮಂಟಪದಲ್ಲಿ ಸರಿಸಮಾನ ಸ್ಥಾನ ಪಡೆದಿದ್ದಾರೆ. ಚಳುವಳಿಯ ಒಳಗೆ ವ್ರತ ತಪ್ಪುವ ಪುರುಷರನ್ನು ಕಾಣುತ್ತೇವೆ. ಆದರೆ ವ್ರತ ತಪ್ಪಿದ ಮಹಿಳೆಯನ್ನು ನಾವು ನೋಡಲಾರೆವು. ಅದಕ್ಕೇನೆ ವ್ರತತಪ್ಪಿದ ಪುರುಷರನ್ನು ತರಾಟೆಗೆ ತೆಗೆದುಕೊಂಡ ಮಹಿಳೆಯರನ್ನು ನಾವು ನೋಡುತ್ತೇವೆ. ಉದಾ: ಆಯ್ದಕ್ಕಿ ಲಕ್ಕಮ್ಮ. ಅಸಂಗ್ರಹ ತತ್ವಕ್ಕೆ ಹೆಸರಾದವಳು ಲಕ್ಕಮ್ಮ. ಇದಕ್ಕೆ ವಿರುದ್ಧವಾಗಿ ನಡೆದ ಗಂಡನನ್ನು ಶಂಕಿಸಿ ಪ್ರಶ್ನಿಸಿದ್ದಾಳೆ.

'ಈಸಕ್ಕಿ ಆಸೆ ನಿಮಗೇಕೆ ಮಾರಯ್ಯ' ಎಂದು ದಿನದ ದುಡಿಮೆಗಿಂತ ಹೆಚ್ಚಿನ ದುರಾಸೆಯಲ್ಲಿ ಅಕ್ಕಿಯನ್ನು ಆರಿಸಿಕೊಂಡು ಬಂದಾಗ ಅದನ್ನು ಮರಳಿ ಬಿದ್ದ ಜಾಗಕ್ಕೆ ಸುರಿಸಿ ಬರುತ್ತಾಳೆ. ಅಂದರೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರ ಸ್ವಾತಂತ್ರ್ಯ ಹರಣವಾಗಿದ್ದು, ಆದರೆ ಶರಣರ ನಡುವೆ ತಪ್ಪನ್ನು ಪ್ರಶ್ನಿಸುವ ಅಧಿಕಾರವನ್ನು ಮಹಿಳೆ ಪಡೆದಿದ್ದಳು. ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಅಷ್ಟೇ ಅಲ್ಲ, ಹಿಂದೆಂದೂ ಯಾವುದೇ ಚಳುವಳಿಗಳಲ್ಲಿ ಇಷ್ಟು ಜನ ಮಹಿಳೆಯರು ಭಾಗವಹಿಸಿದ್ದು ಕಂಡು ಕೇಳರಿಯದ ಸಂಗತಿ. ಇಲ್ಲಿ ಮಹಿಳೆಯರು ಭಾಗವಹಿಸಿದ್ದಷ್ಟೇ ಅಲ್ಲ, ತಮ್ಮ ಅಭಿಪ್ರಾಯವನ್ನು ಮುಕ್ತವಾಗಿ ಹಂಚಿಕೊಂಡಿದ್ದಾರೆ. ಶರಣೆಯರ ವಚನಗಳನ್ನು ಓದುತ್ತ ಹೋದರೆ ಅನುಭವ ಮಂಟಪದಲ್ಲಿನ ಮಹಿಳಾಸಮಾನತೆಯ ವಾಸ್ತವಾಂಶ ಅರಿವಿಗೆ ಬರುತ್ತದೆ.

**೪. ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೆ?**

**ಉತ್ತರ:** ೧೨ನೇ ಶತಮಾನದ ಚಳುವಳಿ ಪ್ರಧಾನವಾಗಿ ಎರಡು ನೆಲೆಗಳಲ್ಲಿ ನಡೆದ ಹೋರಾಟ. ಒಂದು ಚಾತುರ್ವರ್ಣ ವ್ಯವಸ್ಥೆಯ ವಿರುದ್ಧ, ಇನ್ನೊಂದು ದುಡಿಯುವ ಜನರ ಮೇಲೆ ನಡೆಯುತ್ತಿದ್ದ ಶೋಷಣೆಯ ವಿರುದ್ಧ. ಈ ಎರಡು ಪ್ರಧಾನ ಆಶಯಗಳಿಗೆ ಚಳವಳಿ ಒತ್ತುಕೊಟ್ಟಿದೆ. ಆದರೆ ಅದೇ ಸಂದರ್ಭದಲ್ಲಿ ಸಮಾಜದ ಒಳಗಿನ ಹಲವು ಹುಳುಕುಗಳನ್ನು ನಿವಾರಿಸಿಕೊಳ್ಳುವ ಪ್ರಯತ್ನವನ್ನು ಪ್ರಯೋಗಶೀಲವಾಗಿ ಮಾಡಿದೆ. ಅದರಲ್ಲೂ ಬಹಳ ಮುಖ್ಯವಾದುದು ಅಸ್ಪೃಶ್ಯತಾ ನಿವಾರಣೆ ಮತ್ತು ಮಹಿಳಾ ಸಮಾನತೆ.

ಇವೆರಡೂ ಚಳವಳಿಯ ಆಂತರ್ಯದಲ್ಲಿ ನಡೆದ ಸಾಮಾಜಿಕ ಬದಲಾವಣೆ. ಹೀಗಾಗಿ ಶರಣರ ನಡುವೆ ಒಳ ಬಂಡಾಯದ ಅಗತ್ಯವಿದ್ದಿಲ್ಲ. ಅದಕ್ಕಿಂತ ಒಳಗಿನ ಪರಿವರ್ತನೆಯ ರೂಪದಲ್ಲಿ ಚಳವಳಿ ಹೆಚ್ಚು ನೈತಿಕತೆ ಪಡೆದುಕೊಳ್ಳುವುದು ನಡೆದಿದೆ. ಸಾಮಾಜಿಕ ಪರಿವರ್ತನೆಯನ್ನು ವಿಸ್ತರಿಸಿಕೊಂಡಂತೆ.

**೫. ನಿಮಗೆ ಪ್ರಿಯರಾದ ವಚನಕಾರರು-ವಚನಕಾರ್ತಿಯರನ್ನು ಕುರಿತು ವಿವರವಾಗಿ ಹೇಳಿ?**

**ಉತ್ತರ:** ನನಗೆ ಪ್ರಿಯರಾದ ವಚನಕಾರರು, ವಚನಕಾರ್ತಿಯರು ಬಸವಣ್ಣನವರು, ಅಲ್ಲಮಪ್ರಭು, ಅಕ್ಕಮಹಾದೇವಿ, ಜಾಡಮಾಲಿ ಸತ್ಯಕ್ಕ, ಆಯ್ದಕ್ಕಿ ಲಕ್ಕಮ್ಮ, ಗೊಗ್ಗವ್ವೆ, ಕಾಳವ್ವೆ, ವೈದ್ಯ ಸಂಗಣ್ಣ ಮುಂತಾದವರು.

ವಚನಗಳಲ್ಲಿ ಮೌಢ್ಯ ವಿರೋಧಿ ನಿಲುವನ್ನು ಎತ್ತಿಹಿಡಿದ ಬಸವಣ್ಣನವರು

**ನೀರು ಕಂಡಲ್ಲಿ ಮುಳುಗುವರಯ್ಯಾ**
**ಮರವ ಕಂಡಲ್ಲಿ ಸುತ್ತುವರಯ್ಯ**
**ಬತ್ತುವ ಜಲವನೊಣಗುವ ಮರವ**
**ಮೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ**

ಅಲ್ಲಮಪ್ರಭು ವೈದಿಕರು ಬೋಧಿಸಿ ಆಚರಿಸುತ್ತಿದ್ದ ಶೋಷಣೆಯ ಸಾಧನವಾಗಿದ್ದ ನೇಮಗಳನ್ನು ಧಿಕ್ಕರಿಸುತ್ತಾರೆ.

**ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ**
**ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ**
**ಅಗ್ಘವಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ**
**ಇವು ಷಟ್‌ಸ್ಥಳಕ್ಕೆ ಹೊರಗು**
**ಭಕ್ತಿನಿಷ್ಠೆಯಿಲ್ಲದವರ ಕಂಡಡೆ ಮೆಚ್ಚರು ಗುಹೇಶ್ವರ**

ಮೌಢ್ಯಗಳಿಂದ ದೂರವಾದ ಮನುಷ್ಯನಲ್ಲಿ ಜೀವನವನ್ನು ಎದುರಿಸುವ ಆತ್ಮಸ್ಥೈರ್ಯ ಬೆಳೆಯುತ್ತದೆಂಬುದಕ್ಕೆ ಸಾಕ್ಷಿ ಬಸವಣ್ಣನವರ ಈ ವಚನ.

**ನಾಳೆ ಬಪ್ಪುದು ನಮಗಿಂದೇ ಬರಲಿ**
**ಇಂದು ಬಪ್ಪುದು ನಮಗೀಗಲೇ ಬರಲಿ**
**ಇದಕಾರಂಜುವರು? ಇದಕಾರಳಕುವರು?**
**ಜಾತಸ್ಯ ಮರಣಂ ಧ್ರುವಂ ಎಂದುದಾಗಿ**

ನಮ್ಮ ಕೂಡಲಸಂಗಮ ದೇವರು ಬರೆದ ಬರಹವ ತಪ್ಪಿಸುವಡೆ ಹರಿಹರಬ್ರಹ್ಮಾದಿಗಳಿಗಳವಲ್ಲ

ಅಕ್ಕಮಹಾದೇವಿಯ ವಚನಗಳು:-

**ಆಹಾರವ ಕಿರಿದು ಮಾಡಿರಣ್ಣಾ**
**ಆಹಾರವ ಕಿರಿದು ಮಾಡಿರಣ್ಣಾ**
**ಆಹಾರದಿಂದ ವ್ಯಾಧಿ ಹಬ್ಬಿ ಬಲಿವುದಯ್ಯಾ**
**ಆಹಾರದಿಂ ನಿದ್ರೆ, ನಿದ್ರೆಯಿಂ ತಾಮಸ**



ಮಧುಮೇಹ ಇಂದು ಮಾರಕ ರೋಗವಾಗಿ ಪರಿಣಮಿಸಿದೆ. ಇದರೊಂದಿಗೆ ಹೃದಯಾಘಾತಗಳು ಹೆಚ್ಚಾಗುತ್ತಿವೆ. ಇದಕ್ಕೆ ಕಾರಣ ಅಧಿಕ ಆಹಾರ ಸೇವನೆ ಮತ್ತು ಜೀವನಶೈಲಿಯ ಬದಲಾವಣೆ. ಅಕ್ಕಮಹಾದೇವಿಯ ಈ ವಚನ ಎಲ್ಲರನ್ನು ಎಚ್ಚರಿಸುವಂತಿದೆ.

**ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ**
**ತನ್ನ ನೂಲು ತನ್ನನ್ನೇ ಸುತ್ತಿ ಸಾವ ತೆರನಂತೆ**
**ಮನ ಬಂದುದ ಬಯಸಿ ಬೇಯುತ್ತಿದ್ದೇನೆ**
**ಅಯ್ಯಾ ಇಂದು ನೀನೊಲಿದು ಎನ್ನ ಮನವ ದುರಾಸೆಯ ಮಾಣಿಸಿ**
**ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನಾ**

ರೇಶಿಮೆ ಹುಳುವಿನ ಬದುಕುವ ಬಗೆಯನ್ನು ನೋಡಿದರೆ ಅಜ್ಞಾನದ ಕೊಳದಲ್ಲಿ ಅದೆಷ್ಟು ಮುಳುಗಿದ್ದೇವೆಂದು ಅರಿವಾಗುತ್ತವೆ. ಈ ವಚನದಲ್ಲಿರುವ ಅರ್ಥವನ್ನು ಅರಿಯುತ್ತ ಹೋದಂತೆ ಲಂಚ, ಸ್ವಜನ ಪಕ್ಷಪಾತಗಳಂತಹ ಸುಳಿಯಲ್ಲಿ ಮನುಷ್ಯ ಸಿಲುಕಿ ತನ್ನ ಸಮಾಧಿ ತಾನೇ ಮಾಡಿಕೊಳ್ಳುತ್ತಿರುವ ಚಿತ್ರಣ ನಮ್ಮೆದುರು ಸುಳಿಯುತ್ತದೆ.

**ಚಂದನವ ಕಡಿದು ಕೊರೆದು ತೇಯ್ದೊಡೆ**
**ನೊಂದೆನೆಂದು ಕಂಪ ಬಿಟ್ಟಿತ್ತೆ?**
**ತಂದು ಸುವರ್ಣವ ಕಡಿದೊರೆದೊಡೆ**
**ಕಳಂಕ ಹಿಡಿದಿತ್ತೆ?**
**ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಾ**
**ನೀನು ಕೊಂದಡೆಯೂ ನಾನು ಶರಣೆಂಬುದ ಮಾಣೆ**

ಈ ಉಪಮೆ ಹೊಚ್ಚಹೊಸದೊಂದು ಬದುಕನ್ನೆ ನಮ್ಮೆದುರು ತೆರೆದಿಡುತ್ತದೆ. ಗಂಧದಂತೆ ಶಿವನಿಗಾಗಿ ಜೀವ ತೇಯ್ದ ಬಗೆಯನ್ನು ವಿವರಿಸುತ್ತದೆ. ಮಾನವನ ಬಯಕೆ, ಆಮಿಷ, ಮೋಹ ಅವನಲ್ಲಿರುವ ಮನುಷ್ಯತ್ವವನ್ನು ಹಾಳುಗೆಡುವುತ್ತಿರುತ್ತದೆ.

ಆಹಾರ ನೀತಿಯ ಕಾಳವ್ವೆ ಹೀಗೆ ಹೇಳುತ್ತಾಳೆ:-

**ಕುರಿಕೋಳಿ ಕಿರುಮೀನು ತಿಂಬುವರ**
**ಊರ ಒಳಗಿರಿ ಎಂಬಿರಿ**
**ಸತ್ತ ಗೋವ ತಿಂಬುವರ**
**ಊರ ಹೊರಗಿರಿ ಎಂದಿರಿ**

ಎಂದು ತರ್ಕ ಸೂಕ್ತವಾಗಿ ಪ್ರಶ್ನಿಸುತ್ತಾಳೆ. ಜೀವಹತ್ಯೆ ಮತ್ತು ಜೀವ ಹೋದ ಮಾಂಸ ಇವುಗಳ ನಡುವಿನ ಅಹಿಂಸಾ ತತ್ವ ಈ ಹಿನ್ನೆಲೆಯಲ್ಲಿ ಧರ್ಮ ಜಿಜ್ಞಾಸೆಯನ್ನು ಮಾಡುತ್ತಾಳೆ. ಜೊತೆಗೆ ಆಹಾರ ನೀತಿಯ ತಾರತಮ್ಯವನ್ನು ಪ್ರಶ್ನಿಸುತ್ತಾಳೆ. ಈ ಎಲ್ಲ ಹಿನ್ನೆಲೆಗಳಲ್ಲಿ ಗಮನಿಸಿದಾಗ ಶರಣ-ಶರಣೆಯರ ವೈಚಾರಿಕ ದೃಷ್ಟಿಕೋನ ವೈಚಾರಿಕ ಮನೋಧರ್ಮ ನಿಸರ್ಗಪರ ನಡೆಯ ಜೀವನ ವಿಧಾನವನ್ನು ಸಾರುತ್ತಿವೆ.

**೬. ಹೆಣ್ಣು ಮತ್ತು ಆರ್ಥಿಕ ಸ್ವಾವಲಂಬನೆಯ ಹೊಳಹುಗಳನ್ನು ವಚನಕಾರ್ತಿಯರಲ್ಲಿ ಗುರುತಿಸಲು ಸಾಧ್ಯವಿದೆಯೆ?**

**ಉತ್ತರ:** ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಹೆಣ್ಣಿನ ನೆಲೆಯಲ್ಲಿ ಕಾಯಕಗಳನ್ನು ಗುರುತಿಸಿ ಗೌರವಿಸಿದ್ದು ೧೨ನೇ ಶತಮಾನದಲ್ಲಿ. ಕೃಷಿಕ್ಷೇತ್ರದಲ್ಲಿಯೂ ಶ್ರಮದ ಪಾಲನ್ನು ನೆನಪಿಸಿಕೊಂಡರೆ ಗಂಡಿಗಿಂತ ಹೆಚ್ಚು ಹೆಣ್ಣು ದುಡಿಮೆಯಲ್ಲಿ ತೊಡಗಿಕೊಂಡಿರುತ್ತಾಳೆ. ಮನೆಯಲ್ಲಿ ಅಡುಗೆಯಿಂದ ಹಿಡಿದು ಕುಟುಂಬ ನಿರ್ವಹಣೆಯ ಬಹುಪಾಲು ಜವಾಬ್ದಾರಿ ಹೊತ್ತವಳು ಹೆಣ್ಣು. ಆದರೆ ಎಂದೂ ಹೆಣ್ಣಿನ ಈ ಶ್ರಮವನ್ನು ಆರ್ಥಿಕ ಮಾಪನದಲ್ಲಿ ಗುರುತಿಸಿ ಗೌರವಿಸಿಲ್ಲ. ನಾವು ನಳಪಾಕ, ಭೀಮಪಾಕ ಎನ್ನುತ್ತೇವೆ. ಆದರೆ ಎಲ್ಲ ಕುಟುಂಬಗಳಲ್ಲಿ ಎಲ್ಲ ರೀತಿಯ ಸೇವೆ ಮಾಡಿ ಎಲ್ಲರಿಗೂ ಅಡುಗೆ ಮಾಡಿ ಉಣಬಡಿಸುವ ಹೆಣ್ಣಿನ ಕೈರುಚಿಗೆ ಸ್ಥಾನವೇ ಇಲ್ಲ. ಮಾನ್ಯತೆಯೇ ಇಲ್ಲ. ಅದಕ್ಕೂ ನಳಭೀಮರೇ ಬೇಕು. ಪ್ರತಿಯೊಂದು ಉದ್ಯೋಗದ ಹಿಂದೆ ಪುರುಷ ಪ್ರಧಾನತೆಯಿರುವುದನ್ನು ಒತ್ತಿ ಹೇಳಬೇಕಾದ ಅಗತ್ಯವಿಲ್ಲ. ಆದರೆ ೧೨ನೆ ಶತಮಾನದಲ್ಲಿ ಮಹಿಳೆಯ ಶ್ರಮವನ್ನು ಕಾಯಕ ಮೂಲವನ್ನು ಗೌರವದಿಂದ ಕಂಡಿದ್ದಾರೆ. ಉದಾ: ಕದಿರ ಕಾಯಕದ ರೆಮ್ಮವ್ವೆ, ಕೊಟ್ಟಣ ಕಾಯಕದ ಭೀಮವ್ವ, ಕನ್ನಡಿ ಕಾಯಕದ ರೇಮಮ್ಮ, ಕಾಲಕಣ್ಣೆಯ ಕಾಮಮ್ಮ, ಆಯ್ದಕ್ಕಿ ಲಕ್ಕಮ್ಮ ಹೀಗೆ ಹಲವು ಜನ ಶರಣೆಯರು ತಾವು ಮಾಡುತ್ತಿದ್ದ ಕಾಯಕ ಮೂಲದಿಂದ ಗುರುತಿಸಲ್ಪಟ್ಟಿದ್ದಾರೆ. ಅಷ್ಟೇ ಅಲ್ಲದೆ, ತಮ್ಮ ತಮ್ಮ ಕಾಯಕ ಪರಿಭಾಷೆಗಳ ಮೂಲಕ ಆಧ್ಯಾತ್ಮಿಕ ಚಿಂತನೆ ನಡೆಸಿದ್ದಾರೆ. ಇದು ಮಹಿಳೆಯರ ವಿಶೇಷ ಅರಿವು ಮತ್ತು ಕ್ರಿಯೆ ಎರಡೂ ಒಂದಾದ ಪರಿಯಲ್ಲಿ ಸ್ವಾಭಿಮಾನಶೀಲರಾಗಿ ಬಾಳಿದ್ದಾರೆ. ಸತ್ಯಕ್ಕ ಇದಕ್ಕೆ ದೊಡ್ಡ ಉದಾಹರಣೆ

**ಲಂಚ ವಂಚನಕ್ಕೆ ಕೈಯಾಣದ ಭಾಷೆ.**
**ಬಟ್ಟೆಯಲ್ಲಿ ಬಿದ್ದ ಹೊನ್ನವಸ್ತ್ರವ**
**ಒಂದೆರಗಳಿಗೆ ಮುಟ್ಟಿದೆನಾದೊಡೆ**
**ನಿಮ್ಮಾಣೆ ನಿಮ್ಮ ಪ್ರಮಥರಾಣೆ**
**ಮುಟ್ಟಿದೆನಾದೊಡೆ ನೀನಾಗಲೇ**
**ಎನ್ನ ನರಕದಲ್ಲಿ ಅದ್ದಿ ಎದ್ದು ಹೋಗ ಶಂಭುಜಕ್ಕೇಶ್ವರಾ.**

ಎಂದು ದೇವರಿಗೆ ಸವಾಲು ಹಾಕುತ್ತಾಳೆ. ತಾನು ಕಸಗುಡಿಸುವ ಸಾಮಾನ್ಯ ಜಾಡಮಾಲಿಯಾದರೂ ಅವಳು ಶ್ರಮವಿಲ್ಲದ ಸಂಪತ್ತನ್ನು ಕಸದಂತೆ ತಿರಸ್ಕರಿಸುತ್ತಿದ್ದಳು. ಗುಡಿಸಿ ಎಸೆಯುತ್ತಿದ್ದಳು. ಇದು ಅವಳ ಕಾಯಕದ ಸತ್ಯಶುದ್ಧ ಶೀಲ ನೀತಿ. ಹೀಗಾಗಿಯೇ ಇವರಿಗೆಲ್ಲ ಒಂದು ನೈತಿಕ ಆತ್ಮಸ್ಥೈರ್ಯವಿತ್ತು. ಜೊತೆಗೆ ಆಗಿನ ಕಾಲದ ಕೌಟುಂಬಿಕ ವ್ಯವಸ್ಥೆಯ ರೀತಿಯಲ್ಲಿ ಸತಿಪತಿಗಳೊಂದಾದ ಸಾಮರಸ್ಯದ ಸಮಾನಶೀಲ ಘನತೆ, ಗೌರವ ಅವರ ಬದುಕಾಗಿತ್ತು. ಆದ್ದರಿಂದಲೇ ಗಂಡಿನ ದಬ್ಬಾಳಿಕೆಯಾಗಲೀ, ಹೆಣ್ಣಿನ ಶೋಷಣೆಯ ನರಳಿಕೆಯಾಗಲೀ ಕಾಣಸಿಗುವುದಿಲ್ಲ. ಕೌಟುಂಬಿಕ ಆರ್ಥಿಕ ಸ್ಥಿತಿಗತಿಯೂ ಸಹಭಾಗಿತ್ವ ಸಮಾನಭಾಗಿತ್ವ ಎರಡೂ ಇದ್ದದ್ದು ವಚನಕಾರ್ತಿಯರ ವಚನಗಳಲ್ಲಿ ತಿಳಿಯುತ್ತದೆ, ಕೇಳಿಬರುತ್ತದೆ.



**೭. ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೆ?**

**ಉತ್ತರ:** ಸಹಿಷ್ಣುತೆ ಬಹುತ್ವದ ಬದುಕಿನಲ್ಲಿ ಅಗತ್ಯವಾಗಿ ಬೇಕಾದ ಮೂಲ ಮನೋಧರ್ಮ. ನಾವು ಎಲ್ಲರನ್ನೂ ಸಮಾನಶೀಲವಾಗಿ ನೋಡಬೇಕಾದುದು ನಮ್ಮ ಧರ್ಮ. ಭಿನ್ನ ಅಭಿರುಚಿಯ ಭಿನ್ನ ಆಲೋಚನೆಯ ಎಲ್ಲರನ್ನೂ ಸಹಿಸಿಕೊಳ್ಳುವುದಕ್ಕೆ ಎಲ್ಲರಿಂದಲೂ ಸಾಧ್ಯವಿದೆ. ಸಹನಾ ಗುಣವೇ ಸಹಬಾಳ್ವೆಯ ಮೂಲ ಗುಣ. ಅಸಂಖ್ಯ ಜಾತಿಗಳನ್ನೊಳಗೊಂಡ ಅಸಂಖ್ಯ ಸಂಸ್ಕೃತಿ ಪರಂಪರೆಗಳನ್ನೊಳಗೊಂಡ ಈ ಸಮಾಜದಲ್ಲಿ ಸಹಿಷ್ಣುತೆ ಎಂಬುದು ತೀರಾ ಅಗತ್ಯವಾದ ನಡವಳಿಕೆ. ಶರಣರು ಕಟ್ಟಿದ ಲಿಂಗಾಯತ ಧರ್ಮದೊಳಗೆ ಒಳಗೊಳ್ಳುವ ಗುಣ ಹೇಗೆ ಮುಕ್ತವಾಗಿದೆಯೋ ಅದಕ್ಕೆ ಪೂರಕವಾದಂತೆ ಸಹಿಷ್ಣುತಾ ಮನೋಧರ್ಮವು ಅದರ ಮೂಲದ್ರವ್ಯವಾಗಿದೆ. ಏಕೆಂದರೆ ಚಳವಳಿಯಲ್ಲಿ ತೊಡಗಿಕೊಂಡ ಎಲ್ಲ ವರ್ಗದ ವರ್ಣದ ಜನರಿಗೂ ಅವರವರದ್ದೇ ಆದ ಭಿನ್ನ ಆಹಾರ ಪದ್ಧತಿ, ಭಿನ್ನ ಆಲೋಚನೆಗಳಿದ್ದವು. ಜೀವನ ವಿಧಾನವೂ ವೈವಿಧ್ಯತೆಯಿಂದ ಕೂಡಿದ್ದು ಆಹಾರ ಪದ್ಧತಿಯಲ್ಲಿಯೂ ಅಜಗಜಾಂತರ ವ್ಯತ್ಯಾಸವಿತ್ತು. ಎಲ್ಲವನ್ನೂ ಗೌಣವಾಗಿಸಿಕೊಂಡು ಸಂಘಟನೆ ಪ್ರಧಾನವಾಗಿ ಬೆಳೆಯಬೇಕಿತ್ತು. ಹೀಗಾಗಿ ಪ್ರತಿಯೊಬ್ಬರೂ ತ್ಯಾಗದ ಮೂಲಕ ಸಹಿಷ್ಣುತೆಯ ಮನೋಧರ್ಮವನ್ನು ಬೆಳೆಸಿಕೊಳ್ಳಬೇಕಿತ್ತು. ಇದಕ್ಕೆ ದೊಡ್ಡ ಉದಾಹರಣೆಯೆಂದರೆ ಬಸವಣ್ಣನವರು, ಬ್ರಾಹ್ಮಣ ಮೂಲದಿಂದ ಬಂದ ಶರಣ. ಅವರ ಆಹಾರ ಪದ್ಧತಿಯೂ ಬೇರೆ. ಒಂದು ದಿನ ಮಹಾಮನೆಯಲ್ಲಿ ಈರುಳ್ಳಿಯನ್ನು ಶರಣನೊಬ್ಬ ತಂದು ಸುಲಿಯುತ್ತಿದ್ದಾಗ ಅವರ ವಾಸನೆಗೆ ಅಸಹ್ಯಪಟ್ಟ ಬಸವಣ್ಣನವರು ಯಾರು ಈ ಮಹಾಮನೆಗೆ ಅಮೇಧ್ಯವನ್ನು ತಂದವರು ಎಂದು ಕೋಪಗೊಳ್ಳುತ್ತಾರೆ. ಅದನ್ನು ಸುಲಿಯುತ್ತಿದ್ದ ಶರಣ ಮಹಾಮನೆಯನ್ನು ಬಿಟ್ಟು ದೂರ ಹೋಗುತ್ತಾನೆ. ಕೊನೆಗೆ ಈ ಸಂಗತಿ ಬಸವಣ್ಣನವರಿಗೆ ಗೊತ್ತಾಗಿ ಆ ಶರಣನನ್ನು ಪುನಃ ಮಹಾಮನೆಗೆ ಕರೆತರಲು ಈರುಳ್ಳಿಯ ಮೆರವಣಿಗೆಯನ್ನೇ ಕರೆದೊಯ್ಯುತ್ತಾರೆ. ಹೀಗೆ ಚಳವಳಿಯ ನಾಯಕತ್ವ ವಹಿಸಿದ ಬಸವಣ್ಣನವರೇ ತನ್ನೊಳಗಿನ ಅಸಹಿಷ್ಣುತೆಯನ್ನು ಹೊರಹಾಕಿದಾಗ ಅದಕ್ಕೆ ಕೋಪಗೊಂಡಂತೆ ಹೋದ ಶರಣ. ಕೊನೆಗೆ ಅವನ ಮುನಿಸನ್ನು ನಿವಾರಿಸಲು ಈರುಳ್ಳಿಯ ಮೆರವಣಿಗೆ ತೆಗೆದ ಬಸವಣ್ಣನವರ ನಡೆ ಇಲ್ಲಿ ಸಹಿಷ್ಣುತೆಗೆ ದೊಡ್ಡ ಉದಾಹರಣೆಯಾಗುತ್ತದೆ, ಮಾದರಿಯಾಗುತ್ತದೆ. ಎಂಥವರು ತಪ್ಪು ಮಾಡಿದರೂ ಮರುಕ್ಷಣದಲ್ಲಿಯೇ ಅದನ್ನು ತಿದ್ದಿಕೊಳ್ಳುವ ಆತ್ಮವಿಮರ್ಶೆಯ ಗುಣ ಸಹಿಷ್ಣುತೆಯ ಮೂಲ ಪಾಠ. ಹೀಗಾಗಿ ಇಡೀ ಚಳವಳಿಯಲ್ಲಿ ಸಹಿಷ್ಣುತೆ ಒಂದು ದೊಡ್ಡ ಶಕ್ತಿಯಾಗಿ ಪರಿಣಮಿಸಿತು.

**೮. ವಚನಗಳ ಕಾವ್ಯ ಸೌಂದರ್ಯವನ್ನು ಕುರಿತು ಹೇಳಿ?**

**ಉತ್ತರ:** ವಚನಗಳು ಚಳುವಳಿಯ ಉಪಉತ್ಪನ್ನಗಳು. ಅವುಗಳ ಉದ್ದೇಶ ಸಾಹಿತ್ಯ ರಚನೆಯಲ್ಲ, ಸಾಮಾಜಿಕ ಬದಲಾವಣೆ. ಅದಕ್ಕೆ ಬಸವಣ್ಣನವರು 'ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂದು ಹೇಳುತ್ತಾರೆ. ನಿನಗೆ ಎಂದರೆ ಕೂಡಲಸಂಗಮನಿಗೆ ಎಂದು ಉದ್ದೇಶವೆ ಹೇಳುತ್ತಿದ್ದರೂ ಅದು ಸಮಾಜವನ್ನು ನಿರ್ದೇಶಿಸಿದ ವಿಚಾರವೇ ಆಗಿದೆ. ಆದರೆ ಸಮಾಜಕ್ಕೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ. ಇದು ಎಲ್ಲ ಶರಣರ ವಚನಗಳ ಮೂಲ ಆಶಯ. ಹೀಗಾಗಿ ಇವುಗಳನ್ನು ಶಿಷ್ಟಸಾಹಿತ್ಯದ ರೀತಿಯಲ್ಲಿ ಅಲಂಕಾರ, ಛಂದಸ್ಸು,

ಕಾವ್ಯಮೀಮಾಂಸೆಯ ಮಾನದಂಡಗಳನ್ನು ಬಳಸಿ ವಿಮರ್ಶೆ ಮಾಡಬೇಕಾದ ಅಗತ್ಯವಿಲ್ಲ. ಒಂದು ರೀತಿಯಲ್ಲಿ ಲಭ್ಯವಿರುವ ಎಲ್ಲ ವಚನರಾಶಿಯನ್ನು ಗಮನಿಸಿದಾಗ ಅದೊಂದು ಚಳವಳಿಯ ಮಹಾಕಾವ್ಯವನ್ನು ಕಣ್ಣೆದುರಿಗೆ ನಿಲ್ಲಿಸುತ್ತದೆ. ಈ ಕಾರಣದಿಂದಾಗಿ ವಚನಗಳನ್ನು ಚಳವಳಿಯ ಉಪಉತ್ಪನ್ನಗಳೆಂದು ಕರೆದಿದ್ದು, ಇಷ್ಟಾಗಿಯೂ ಕೆಲವರ ವಚನಗಳಲ್ಲಿ ಅವರ ವ್ಯಕ್ತಿತ್ವದ ವಿಶಿಷ್ಟ ಅಸ್ಮಿತೆಯ ರೂಪದಲ್ಲಿ ಕಾವ್ಯಸೌಂದರ್ಯ ಸಹಜವಾಗಿ ಪ್ರಕಟವಾಗಿದೆ. ಇದಕ್ಕೆ ಉದಾಹರಣೆಯಾಗಿ ಬಸವಣ್ಣನವರು, ಅಲ್ಲಮಪ್ರಭು, ಅಕ್ಕಮಹಾದೇವಿಯ ವಚನಗಳನ್ನು ಹೇಳಬಹುದು. ಕಾವ್ಯಸೌಂದರ್ಯಕ್ಕೆ ಅಗತ್ಯವಾಗಿ ಬೇಕಾದ ಪದಮೈತ್ರಿ, ಉಪಮೆ, ರೂಪಕ, ದೃಷ್ಟಾಂತ, ಧ್ವನಿಚಿತ್ರಕಶಕ್ತಿ ಇತ್ಯಾದಿ ಗುಣವಿಶೇಷಣಗಳು ಇವರ ವಚನಗಳಲ್ಲಿ ಹೇರಳವಾಗಿ ಸಿಗುತ್ತವೆ. ಹಾಗೆಂದು ಬೇರೆಯವರ ವಚನಗಳಲ್ಲಿ ಇವಿಲ್ಲವೆಂದಲ್ಲ. ಅವರ ವಚನಗಳಲ್ಲಿಯೂ ಬೆಡಗಿನ ಭಾಷೆ ಬಳಕೆಯಾಗಿದೆ. ಬೆರಗಿನ ಚಿಂತನೆ ಹರಿದಿದೆ. ಎಲ್ಲಕ್ಕಿಂತ ಮಿಗಿಲಾಗಿ ಸಹಜ ಸುಂದರ ಸ್ವಭಾವೋಕ್ತಿಯ ವಿಶೇಷತೆಗಳಿಂದ ವಚನಗಳು ನಮ್ಮ ಮನಸ್ಸನ್ನು ಆಕರ್ಷಿಸುತ್ತವೆ. ಪ್ರಖರ ಚಿಂತನೆಗಳಿಂದ ನಮ್ಮನ್ನು ಆಲೋಚನೆಗೆ ಹಚ್ಚುತ್ತವೆ. ಸಾಮಾಜಿಕ ಬದಲಾವಣೆಗೆ ಒತ್ತಾಯಿಸುತ್ತವೆ.

**೯. ಶರಣ ಚಳುವಳಿಯಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಅಂಶಗಳು ಯಾವುವು?**

**ಉತ್ತರ:** ಜಾತ್ಯತೀತ ನಿಲುವಿನಲ್ಲಿ ಸಮಾಜವನ್ನು ಕಟ್ಟಬಯಸಿದ್ದು ವರ್ಗ ವರ್ಣಲಿಂಗ ತಾರತಮ್ಯಗಳ ಭೇದವಿಲ್ಲದ ಸಮಸಮಾಜದ ನಿರ್ಮಾಣದ ಕಡೆಗೆ ತುಡಿದದ್ದು. ಇದನ್ನು ಆಗು ಮಾಡುವುದಕ್ಕೆ ಅಂತರಂಗದ ಮಾತಾಗಿ ವಚನಗಳನ್ನು ರಚಿಸಿದ್ದು. ಆ ಅಂತರಂಗದ ಮಾತುಗಳು ಬಹಿರಂಗದ ಜಗತ್ತಿನೊಂದಿಗೆ ಕಳಕಳಿಯಿಂದ ಸಂವಾದ ನಡೆಸಿದ್ದು, ಇವು ನನಗೆ ಮುಖ್ಯ ಅನಿಸಿದ ಅಂಶಗಳು.

**೧೦. ವಚನಕಾರರನ್ನು ಮಾದರಿಯಾಗಿ ನೋಡುವುದರ ಬಗ್ಗೆ ನಿಮ್ಮ ಆಲೋಚನೆಗಳು:**

**ಉತ್ತರ:** ಇಂದು ಕೋಮುವಾದಿ ನೆಲೆಯೊಳಗೆ ಸಮಾಜವನ್ನು ಛಿದ್ರೀಕರಣಕ್ಕೆ ದೂಡುತ್ತಿರುವ ವಾತಾವರಣದಲ್ಲಿ ಸಮಸಮಾಜದ ನಿರ್ಮಾಣಕ್ಕೆ ಒಳಗೊಳ್ಳುವ ಮನೋಧರ್ಮ ತೋರಿದ ಈ ಶರಣರು ಹೆಚ್ಚು ಪ್ರಸ್ತುತ ಅನಿಸುತ್ತದೆ. ಶರಣ ಚಳವಳಿಯಂತಹ ಮತ್ತೊಂದು ಚಳವಳಿ ತುಂಬ ಅಗತ್ಯವೆನಿಸುತ್ತದೆ. ಏಕೆಂದರೆ ಶರಣ ಚಳವಳಿಗೆ ಕೇವಲ ಧಾರ್ಮಿಕ ಮುಖವಿಲ್ಲ, ಸಮಾಜೋ ಆರ್ಥಿಕ ಶೈಕ್ಷಣಿಕ ರಾಜಕೀಯಾತ್ಮಕ ಆಯಾಮಗಳಿವೆ.

●

**ತನುವಿನ ಕೊರತೆಗೆ ಸುಳಿಸುಳಿದು**
**ಮನದ ಕೊರತೆಗೆ ನೆನೆನೆನೆದು**
**ಭಾವದ ಕೊರತೆಗೆ ತಿಳಿತಿಳಿದು**
**ಶಬ್ದದ ಕೊರತೆಗೆ ಉಲಿಉಲಿದು**
**ಗುಹೇಶ್ವರನೆಂಬ ಲಿಂಗ ಮನದಲ್ಲಿ ನೆಲೆಗೊಳ್ಳದಾಗಿ**





# ದೆವ್ವವೂ ದೇವರೇ!

**ಗೊ.ರು. ಚನ್ನಬಸಪ್ಪ**

*೪೦೭, 'ಪ್ರಣಾಮ' ೩ನೇ ಕ್ರಾಸ್,' ಎಫ್ ರಸ್ತೆ*
*ಐಡಿಯಲ್ ಹೋಮ್ಸ್ ಟೌನ್‌ಷಿಪ್, ೨ನೇ ಹಂತ*
*ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮*
*೯೯೮೦೫೧೨೩೮೯*

ಮಹಮ್ಮದೀಯ ಅನುಭಾವಿ ರಬಿಯಾ–ಅಲ್–ಅದಾಬಿಯಾ ತನ್ನಲ್ಲಿದ್ದ ಕುರಾನ್ ಗ್ರಂಥದ ಅನೇಕ ಕಡೆ ಕೆಲವು ಸಾಲುಗಳನ್ನು ಬದಲಾಯಿಸಿದ್ದಳು. ಎಲ್ಲೆಲ್ಲಿ 'ದೆವ್ವವನ್ನು ದ್ವೇಷಿಸು' ಎಂದಿತ್ತೋ ಅಲ್ಲೆಲ್ಲ ಆ ಮಾತನ್ನು ಹೊಡೆದು ಹಾಕಿದ್ದಳು.

ಒಮ್ಮೆ ಇನ್ನೊಬ್ಬ ಅನುಭಾವಿ ಸಂತ ಹಸ್ಸನ್ ಎಂಬುವನು ರಬಿಯಾ ಮನೆಯ ಅತಿಥಿಯಾಗಿ ಉಳಿದಿದ್ದ. ಅವನು ಬರುವಾಗ ನಿತ್ಯಪಠನದ ತನ್ನ ಕುರಾನ್ ಗ್ರಂಥವನ್ನು ಎಲ್ಲೋ ಮರೆತು ಬಂದಿದ್ದ. ಬೆಳಗಿನ ಪ್ರಾರ್ಥನೆಗೆ ಅದು ಬೇಕಾಗಿತ್ತು. ಆಗ ರಬಿಯಾ ತನ್ನಲ್ಲಿದ್ದ ಕುರಾನ್ ಗ್ರಂಥವನ್ನೇ ಕೊಟ್ಟಳು. ಅದನ್ನು ನೋಡಿ ಹಸ್ಸನ್‌ನಿಗೆ ಕಸಿವಿಸಿಯಾಯಿತು. ಏಕೆಂದರೆ, ಅದು ಅಷ್ಟು ಧೂಳು ಹಿಡಿದಿತ್ತು. ಅಂದರೆ, ಅದನ್ನು ಯಾರೂ ಪ್ರತಿದಿನ ಓದುತ್ತಿರಲಿಲ್ಲ. ಅಷ್ಟೇ ಏಕೆ ಅದನ್ನು ಬಳಸಿಯೇ ಇರಲಿಲ್ಲವೆಂಬಂತೆ ಕಂಡಿತು. ಆದರೆ, ಅತಿಥಿಯಾಗಿ ಅತಿಥೇಯ ರಾಬಿಯಾಳನ್ನು ಕೇಳುವುದು ಸೌಜನ್ಯವಲ್ಲವೆಂದು ಭಾವಿಸಿದ ಹಸ್ಸನ್ ಅದನ್ನು ತೆರೆದು ಬೆಳಗಿನ ಪ್ರಾರ್ಥನೆಗಾಗಿ ಓದತೊಡಗಿದ.

ಓದುತ್ತಿದ್ದಂತೆ ಅವನಿಗೆ ಮತ್ತಷ್ಟು ಸೋಜಿಗವಾಯಿತು, ದಿಗ್ಭ್ರಮೆಯಾಯಿತು. ಏಕೆಂದರೆ, ಆ ಗ್ರಂಥಪ್ರತಿಯಲ್ಲಿ ಅಲ್ಲಲ್ಲಿ ತಿದ್ದಲಾಗಿತ್ತು. ಎಲ್ಲೆಲ್ಲಿ 'ದೆವ್ವವನ್ನು ದ್ವೇಷಿಸು' ಎಂದಿತ್ತೋ ಅಲ್ಲೆಲ್ಲಾ ಅದರ ಮೇಲೆ ಗೆರೆಯೆಳೆದುಬಿಡಲಾಗಿತ್ತು. ಕುರಾನ್ ಯಾರೂ ತಿದ್ದಕೂಡದ ಧರ್ಮಗ್ರಂಥ. ಆ ತಿದ್ದುಪಡಿಗಳನ್ನು ಕಂಡ ಹಸ್ಸನ್‌ನಿಗೆ ಮನಃಪೂರ್ವಕವಾಗಿ ಪ್ರಾರ್ಥನೆ ಮಾಡಲಾಗದೆ ಗೊಂದಲಕ್ಕೀಡಾದ. "ಏನಿದು? ಯಾರೂ ತಿದ್ದಕೂಡದ ಕುರಾನ್ ಗ್ರಂಥವನ್ನು ತಿದ್ದುವುದೆಂದರೆ ಏನು? ರಾಬಿಯಾಗೇನಾದರೂ ಹುಚ್ಚು ಹಿಡಿಯಿತೆ? ನಾಸ್ತಿಕಳಾದಳೆ? ಏಕೆಂದರೆ, ಕುರಾನ್ ಗ್ರಂಥವನ್ನು ಯಾರೇ ಮುಸಲ್ಮಾನನು ತಿದ್ದುತ್ತಾನೆಂದರೆ ಅದನ್ನು ಊಹಿಸಲೂ ಸಾಧ್ಯವಿಲ್ಲ. ಕುರಾನ್ ದೈವ ಸಂದೇಶ. ಅದನ್ನು ಯಾರೂ ಬದಲಾಯಿಸುವಂತಿಲ್ಲ. ಹಾಗೆ ಬದಲಾಯಿಸುವುದು ದೈವದ್ರೋಹ, ಧರ್ಮದ್ರೋಹವಾಗುತ್ತದೆ. ಹೀಗಿರುವಾಗ ರಾಬಿಯಾ ಇದನ್ನು ತಿದ್ದಿದ್ದು ಹೇಗೆ?" ಎಂದು ವಿಚಾರಮಾಡತೊಡಗಿದ.

"ಈ ದೃಷ್ಟಿಯಿಂದಲೇ ಪ್ರವಾದಿ ಮಹಮ್ಮದ್ ಮತ್ತೆ ಬರುವುದಿಲ್ಲ. ಯಾರಾದರೂ ಬಂದರೆ, ಮತ್ತೇನನ್ನೋ ಹೇಳಿ ತೊಂದರೆಯುಂಟು ಮಾಡುತ್ತಾರೆ. ಹಾಗಾಗಿ, ಆ ಅವತಾರದ

ಬಾಗಿಲು ಮುಚ್ಚಿಹೋಗಿದೆ. ಹಿಂದೆ ಅನೇಕ ಪ್ರವಾದಿಗಳು ಆಗಿ ಹೋಗಿರಬಹುದು. ಮಹಮ್ಮದನೇ ಮೊದಲ ಪ್ರವಾದಿಯಲ್ಲ. ಆದರೆ ಕೊನೆಯ ಪ್ರವಾದಿ. ಅವನ ನಂತರ ದೇವರಿಂದ ಮತ್ತಾವ ಸಂದೇಶವೂ ಬರುವಂತಿಲ್ಲ. ಕೊಡಬೇಕಾದ ಸಂದೇಶವನ್ನೆಲ್ಲ ಪ್ರವಾದಿ ಮಹಮ್ಮದನಿಗೇ ಕೊಟ್ಟಿದ್ದಾನೆ. ಹೀಗಿರುವಾಗ ರಬಿಯಾಳಂತಹ ಓರ್ವ ಹೆಣ್ಣು ಕುರಾನ್ ಅನ್ನು ತಿದ್ದಲು ಎಷ್ಟು ಧಾರ್ಷ್ಟ್ಯವಿರಬೇಕು?" ಹಸ್ಸನ್ ಆ ಗೊಂದಲದಲ್ಲೇ ಪ್ರಾರ್ಥನೆಯನ್ನು ಮುಗಿಸಿ, ರಾಬಿಯಾ ಬಳಿಗೆ ಹೋದ.

ಅನುಭಾವಿಗಳು ಇರುವುದು ವಿರಳ. ಅವಳು ಹಸ್ಸನ್ನನ ಮುಖವನ್ನು ನೋಡಿಯೇ, "ನೀನು ನೆಮ್ಮದಿಯಿಂದ ಪ್ರಾರ್ಥನೆ ಮಾಡಿದಂತೆ ಕಾಣುವುದಿಲ್ಲ. ಬಹುಶಃ ಆ ಗ್ರಂಥದ ಮೇಲಿದ್ದ ಧೂಳೇ ನಿನಗೆ ಬೇಸರವುಂಟುಮಾಡಿರಬೇಕು. ನೀನು ಇನ್ನೂ ಅದನ್ನು ಮನಸ್ಸಿಗೆ ಹಚ್ಚಿಕೊಂಡಿರುವಂತೆ ಕಾಣುತ್ತದೆ. ನಾನು ಅದರಲ್ಲಿ ಮಾಡಿರುವ ತಿದ್ದುಪಡಿಯಿಂದ ನಿನಗೆ ಅತ್ಯಂತ ದಿಗ್ಭ್ರಮೆಯಾಗಿರಬೇಕು" ಎಂದಳು.

'ಅದು ನಿನಗೆ ಹೇಗೆ ತಿಳಿಯಿತು?' ಎಂದು ಹಸ್ಸನ್ ಕೇಳಿದ. ಅದಕ್ಕೆ ರಾಬಿಯಾ "ನೀನು ಪ್ರಾರ್ಥನೆ ಮಾಡುವಾಗ ನಾನು ಅಲ್ಲೇ ಹಾದು ಹೋದೆ. ಆಗ ನಿನ್ನ ಸುತ್ತ ಅಶಾಂತ ವಾತಾವರಣವಿದ್ದಂತೆ ಕಂಡಿತು. ಅದು ಪ್ರಾರ್ಥನೆಯ ವಾತಾವರಣವಾಗಿರಲಿಲ್ಲ. ಒಂದು ರೀತಿಯ ಪ್ರಕ್ಷುಬ್ಧತೆಯನ್ನು ನಾನು ಕಂಡೆ. ನೀನು ಶಾಂತಿಯಿಂದ ಪ್ರಾರ್ಥನೆ ಸಲ್ಲಿಸಲಾಗಿಲ್ಲ. ಆದ್ದರಿಂದ ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು. ಅನುಮಾನ ಹಾಗೇ ಉಳಿದುಕೊಳ್ಳಬಾರದು" ಎಂದಳು.

ಆಗ ಹಸ್ಸನ್, "ಈಗ ನೀನೇ ಆ ವಿಷಯವನ್ನು ಎತ್ತಿದ್ದರಿಂದ, ನಾನು ಕೇಳಬೇಕಾಗಿದೆ. ಇದನ್ನು ಅಸೌಜನ್ಯ ಎಂದು ನೀನು ತಿಳಿಯಬಾರದು. ಒಬ್ಬ ಹೆಂಗಸು ಹೀಗೆ ಪವಿತ್ರ ಗ್ರಂಥ ಕುರಾನ್ ಅನ್ನು ತಿದ್ದುತ್ತಾಳೆಂಬುದನ್ನು ನಾನು ನಂಬಲೇ ಆಗುತ್ತಿಲ್ಲ" ಎಂದ.

ಅದಕ್ಕೆ ರಾಬಿಯಾ ಪ್ರತಿಕ್ರಿಯಿಸಿ, "ಮೊದಲು ನನ್ನ ಕಷ್ಟವನ್ನು ತಿಳಿದುಕೋ. ನಾನು ದೇವರನ್ನು ಮುಖಾಮುಖಿಯಾಗಿ ಕಂಡ ಕ್ಷಣದ ನಂತರ, ನಾನು ನೋಡಿದ ಎಲ್ಲ ಮುಖಗಳಲ್ಲೂ ಆ ದಿವ್ಯತ್ವವನ್ನೇ ಕಂಡೆ. ಆ ದೈವದ ಹೊರತಾಗಿ ಮತ್ತಿನ್ನೇನೂ ನನಗೆ ಕಾಣದು. ನನ್ನ ಮುಂದೆ ದೆವ್ವವೇ ಬಂದು ನಿಂತರೂ, ನಾನು ದೇವರ ಮುಖವನ್ನೇ ಕಾಣುತ್ತೇನೆ. ಹಾಗಾಗಿ ನಾನು 'ದೆವ್ವವನ್ನು ದ್ವೇಷಿಸು' ಎಂದಿದ್ದ ಆ ಸಾಲನ್ನು ಹೊಡೆದು ಹಾಕಬೇಕಾಯಿತು. ಒಂದು ವೇಳೆ ನಾನು ಪ್ರವಾದಿ ಮಹಮ್ಮದನನ್ನು ಭೇಟಿಯಾದರೆ, 'ಈ ವಾಕ್ಯ ಸರಿಯಿಲ್ಲ' ಎಂದು. ನೇರವಾಗಿ ಹೇಳಬೇಕಾಗುತ್ತದೆ. ಅವು ಅಜ್ಞಾನಿಗಳಿಗೆ ಸರಿ ಎನಿಸಬಹುದು; ಆದರೆ ಪ್ರಜ್ಞಾವಂತರಿಗಲ್ಲ. ಏಕೆಂದರೆ ಅಜ್ಞಾನಿಗಳಿಗೆ ದೇವರು-ದೆವ್ವ, ನಾನು-ನೀನು ಎಂಬ ದ್ವೈತ ಭಾವನೆ ಇರುತ್ತದೆ. ಆದರೆ ಅನುಭಾವಿಗಳು ಅದನ್ನು ಮೀರಿದ ಮನೋಸ್ಥಿತಿಯಲ್ಲಿರುತ್ತಾರೆ" ಎನ್ನುತ್ತಾಳೆ.

ಬಹುಶಃ ಹಸ್ಸನ್ನನಿಗೆ ರಾಬಿಯಾ ಮಾತು ಕೇಳಿ ಭ್ರಮನಿರಸನವಾಗಿರಬೇಕು. ದೇವರೆಂಬುದು ಹೇಗೆ ಅಗೋಚರವೋ ದೆವ್ವವೂ ಅಗೋಚರ. ಅವೆರಡೂ ನಮ್ಮ ಕಲ್ಪನೆಗಳು. ಅಸ್ತಿತ್ವವೇ ಇಲ್ಲದ ಎರಡು ವಿಷಯಗಳಲ್ಲಿ ಭೇದವಿರುವುದು ಹೇಗೆ? ಮೊದಲು ನಾವು ಈ



ದ್ವಂದ್ವದ ಭೇದವನ್ನು ದಾಟಿ ನಿಲ್ಲಬೇಕು. ಆಗ ನಮಗೆ ಸಮಸ್ತವೂ ಸಮಾನವಾಗಿ ಕಾಣುತ್ತದೆ. ಅನುಭಾವವೆಂದರೆ ಈ ಸಮದೃಷ್ಟಿಯ ಸಂಪ್ರಜ್ಞೆಯಲ್ಲದೆ ಬೇರೆಯಲ್ಲ!

ಓಷೋ ಹೇಳಿದ ಈ ಪ್ರಸಂಗ ಶರಣರ 'ನಾನೂ ಇಲ್ಲ, ನೀನೂ ಇಲ್ಲ; ಏನೂ ಇಲ್ಲ' ಎಂಬ ಮಾತನ್ನೇ ಪ್ರತಿಧ್ವನಿಸುತ್ತದಲ್ಲವೆ?

'ದೆವ್ವ-ದೇವರು' ಈ ಹೆಸರುಗಳನ್ನು ಇಟ್ಟವರು ಹಿಂದೂಗಳು. ಈ ಶಬ್ದಗಳನ್ನೇ ಇಂಗ್ಲಿಷಿನಲ್ಲಿ Devil-God ಎನ್ನಲಾಗಿದೆ. ವಾಸ್ತವವಾಗಿ ದೆವ್ವ-ದೇವರು ಎರಡೂ ಶಬ್ದಗಳೂ ಹುಟ್ಟಿಕೊಂಡಿರುವುದು ಸಂಸ್ಕೃತದ 'ದೇವ' ಎಂಬ ಶಬ್ದದ ಬೇರಿನಿಂದಲೇ. ಬಹುಶಃ ಈ ಶಬ್ದಗಳು ಬೇರೆಲ್ಲೂ ಬಳಕೆಯಲ್ಲಿಲ್ಲ. 'ದೇವ' ಎಂದರೆ ದೇವರು. ದೆವ್ವ ಶಬ್ದದ ಮೂಲವು 'ದೇವ'ವೇ. ಅವೆರಡೂ ಒಂದೇ ಲಕ್ಷಣ. ಆದರೆ, ನಮ್ಮ ನೋಟ ಭಿನ್ನ; ನಮ್ಮ ನಿಲುವು ಭಿನ್ನ ಅಷ್ಟೆ. ಪ್ರಜ್ಞಾವಂತನ ದೃಷ್ಟಿಯಲ್ಲಿ ಎರಡೂ ದಿವ್ಯವೇ. ಎರಡರಲ್ಲೂ ಅವನ ಸೌಂದರ್ಯ-ಸೋಜಿಗಗಳನ್ನು ಕಾಣುತ್ತಾನೆ. 'ಅಜ್ಞ ಜನರ ದಿಕ್ಕು ತಪ್ಪಿಸಲು ಧರ್ಮದ ಹೆಸರಿನಲ್ಲಿ ಈ 'ದೆವ್ವ - ದೇವ'ರ ಭೇದ ಸೃಷ್ಟಿಸಿದ ಹುನ್ನಾರ ಮಾಡಿದವರು ಕುಹಕ ಬುದ್ಧಿಯ ಧರ್ಮೀಯರೇ ವಿನಃ ಬೇರಲ್ಲ. ದೇವರು-ದೆವ್ವ ಎನ್ನುವುದು ಬೇರೆಯಲ್ಲ; ಇದ್ದರೂ ಅವು ಬೇರೆಯಲ್ಲ! ಇದು ಓಷೋನ ವಿಚಾರ.

ನಿಜ. ಮಾನವ ಸಹಜಕ್ಕೆ ಸಲ್ಲದ ಕೃತ್ಯಗಳಲ್ಲಿ ತೊಡಗಿದರೆ ನಾವೇ ದೆವ್ವಗಳು. ಮಾನವೀಯ ಸೇವೆ ಸಲ್ಲಿಸಿದರೆ ನಾವೇ ದೇವರುಗಳು. ಕೊಲ್ಲುವೆನೆಂಬ ಭಾಷೆ ಇವೆರಡಕ್ಕೂ ಇದ್ದರೂ, ಗೆಲ್ಲುವೆನೆಂಬ ಛಲ ನಮ್ಮದಾಗಬೇಕು ಎಂಬ ಶರಣವಾಣಿ ಅವೆರಡರ ಧ್ವಂದಾರ್ಥವನ್ನು ಬಯಲು ಮಾಡುತ್ತದೆ.

(ಆಧಾರ: ಓಷೋ ಹೇಳಿದ ಒಂದು ಪ್ರಸಂಗ) ●

## ಕುವೆಂಪು ಚಿತ್ರಿಸಿದ ದ್ರೋಣ-ಏಕಲವ್ಯರು

ಏಕಲವ್ಯನ ಮಾತುಗಳಲ್ಲೇ ಹೇಳುವುದಾದರೆ, ದ್ರೋಣನು "ಗುರು, ಉಣ್ಬನ್, ಉಸಿರ್ವನ್, ನಮ್ಮಂತೆ ಬದುಕಿರ್ಪನ್... ಅರಸು ಮಕ್ಕಳ್ಗಿವನ್ ಗರಡಿಯಾಚಾರ್ಯನ್, ಬಿಲ್ಲೋಜನ್, ಪಾರ್ವರೊಳ್ ಪಾರ್ವನ್, ದ್ವಿಜವರೇಣ್ಯನ್, ಗಣ್ಯನ್, ಅಗ್ರಗಣ್ಯನ್, ಪರಮಗುರು".

ಇಂತಹ ನಂಬಿಕೆ ಇಟ್ಟುಕೊಂಡಿದ್ದ ಶಿಷ್ಯನ ಬಗೆಗೆ ದ್ರೋಣ ನಡೆದುಕೊಂಡ ಬಗೆಯನ್ನು ಮಹಾಭಾರತದ ಪುರಾಣಕಾರರು "ಏಕಲವ್ಯನ ಗುರುಭಕ್ತಿ" ಎಂದು ವರ್ಣಿಸಿದ್ದಾರೆ. ಆದರೆ, ಮಹಾಕವಿ ಕುವೆಂಪು ಅವರು ತಮ್ಮ "ಬೆರಳ್ಗೆ ಕೊರಳ್" ನಾಟಕ ಕೃತಿಯಲ್ಲಿ ನಮಗೆ ವಾಸ್ತವ ದರ್ಶನ ಮಾಡಿಸುತ್ತಾರೆ.

ಏಕಲವ್ಯ ಕಾಡು ಬಿಟ್ಟು ಈ ನಾಡ ಗುರುವಿನ ಬಳಿ ಬಿಲ್‌ಬಿಜ್ಜೆ (ಧನುರ್ವಿದ್ಯೆ) ದೊರಕಿಸಿಕೊಳ್ಳಬೇಕೆಂದು ಬರುತ್ತಾನೆ. ಶೂದ್ರನೊಬ್ಬನ ಸಹವಾಸಕ್ಕೆ ಅರಸು ಮಕ್ಕಳು

ಅಡ್ಡಿಯೊಡ್ಡಿದಾಗ, ದ್ರೋಣ ಅಸಹಾಯಕನಂತೆ ವರ್ತಿಸುತ್ತಾನೆ. ಅರಸು ಮಕ್ಕಳು, "ಶೂದ್ರರೊಡನೆಮಗೆ ಸಹಚರ್ಯೆ ಸಲ್ಲದು" ಎಂದು ಉಸುರಿದಾಗ; 'ಲೋಕಾಚಾರ್ಯ' ದ್ರೋಣ ಹೇಳುವ ಮಾತನ್ನು ಕೇಳಿ: "ಶೂದ್ರನಾದೊಡಮೇನ್ ಸಮರ್ಥನ್, ವಿನಯಶಾಲಿ. ಕಲ್ತಮೇಲಿಂ ಬಳಿಂ ನಿಮಗೆ ಸಲ್ವನ್. ನಿಮ್ಮ ಸೇವೆಯೊಳೆ ನಿಲ್ವನ್, ಬಲ್ಲಿದನ್ ಕೈಂಕರ್ಯವೆಸಗೆ ಬಲ್ಲಿದರ್ ನೀವಲ್ತೆ".

ಶೂದ್ರರಿಗೆ ವಿದ್ಯೆ ಕಲಿಯುವ ಸಾಮರ್ಥ್ಯವಿರುವ ಬಗೆಗೆ ದ್ರೋಣನಿಗೆ ಅನುಮಾನವಿದ್ದರೂ, ಏಕಲವ್ಯನ ವಿನಯವನ್ನು ಕಂಡು ಅವನು ಸಮರ್ಥ ಎಂದು ಹೇಳುವುದೇ ಒಂದು ಸೋಜಿಗ. ಏನಿದ್ದರೂ, ಶೂದ್ರ ಕಲಿತ ಮೇಲೂ ಉತ್ತಮ ಕುಲದವರ ಸೇವೆಗೇ ಸಲ್ಲಬೇಕು; ನಿಲ್ಲಬೇಕು. ಅವರಿಗೆ ಸರಿಸಮಾನರಾಗುವಂತಿಲ್ಲ. ಇದು ದ್ರೋಣನ ಧೋರಣೆ. ಆದರೂ, "ಅಂತಹ ಬಲ್ಲಿದನ ಕೈಂಕರ್ಯ ನಿಮಗೆ ಸಲ್ಲುವಂತಾದರೆ ನೀವೂ ಬಲ್ಲಿದರೇ ಆಗುತ್ತೀರಿ" ಎಂದು ಅರಸು ಮಕ್ಕಳಿಗೆ ಹೇಳುತ್ತಾನೆ. ಆದರೆ ಅವನ ಉಪದೇಶವೇನೂ ಕೆಲಸ ಮಾಡಲಿಲ್ಲ. "ದ್ರೋಣನುಪದೇಶಮನ್ ಕಡೆಗಣ್ಚಿದರ್, ಪೊರಟ್ಟಿದರ್" ಏಕಲವ್ಯನನ್ನು.

ಆಗ ಗುರು ದ್ರೋಣ ಹೇಳಿದ ಔದಾರ್ಯ(!)ದ ಮಾತುಗಳಿವು: "ಏಕಲವ್ಯ ಅಳದಿರ್, ಆಸೆಗೆಡದಿರ್, ನೀನೆಮ್ಮ ಮನೆಯಾಳಾಗಿರು". ಮನೆಯಲ್ಲೂ ಆತ ಶಿಷ್ಯನಾಗಿರುವಂತಿಲ್ಲ; ಆಳಾಗಿಯೇ ಇರಬೇಕು. ಶೂದ್ರನಿಗೆ ಕೈಂಕರ್ಯವೇ ಹಕ್ಕು, ಸೂಕ್ತ, ಸಹಜ ಎನ್ನುತ್ತದೆ ದ್ರೋಣನ ಮಾತು.

ಇಷ್ಟಾದರೂ, ಏಕಲವ್ಯನು ದ್ರೋಣನನ್ನು ತನ್ನ ಆರಾಧ್ಯದೈವವನ್ನಾಗಿ ಮಾಡಿಕೊಳ್ಳುತ್ತಾನೆ. ಗುರುವಿನ ಪ್ರತಿಮೆಯನ್ನೇ ಗುರುವಾಗಿ ಪರಿಭಾವಿಸಿ, ಗುರುವಿದ್ಯೆಯನ್ನು ಸ್ವಯಂ ಸಾಧಿಸಿ, ಅದರಲ್ಲಿ ಪರಮಸಿದ್ಧಿಯನ್ನು ಪಡೆಯುತ್ತಾನೆ.

ದ್ರೋಣನಿಗೆ ಇದು ತಿಳಿದಾಗ, "ಎನ್ನ ಹಿರಿಮೆಯ ನೆನಗೆ ತೋರಿದಯ್, ಗುರುಕೃಪಾ ಮಹಿಮೆಯಂ ಲೋಕಕ್ಕೆ ಸಾರಿದಯ್, ನೀನು ಗುರುವೆಂದೊಡೆ. ನನಗೆ ಗುರುತನವನಿತ್ತೆ. ಮೇಣ್ ಗುರುವಾದೆ" ಎಂದು ಹೇಳುತ್ತಾನೆ. ಆದರೆ, ಅದೇ ಬಾಯಿಯಿಂದ ಮತ್ತೇನನ್ನೋ ಹೇಳುತ್ತಾನೆ. ಆವುದೋ ಸಂದರ್ಭದಲ್ಲಿ ಅರ್ಜುನನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಬೇಕೆಂದು, ತನ್ನ ಚಿಂತೆಯ ಪೀಠಿಕೆ ಹಾಕುತ್ತಾನೆ. ಎರಡರಿಯದ ಏಕಲವ್ಯ 'ಆಚಾರ್ಯನಿಂತಪ್ಪ ಸಂಕಟಕೆ ನಾನಾಗದಿಕ್ಕೆ ಕಾರಣಂ' ಎನ್ನುತ್ತಾನೆ. ಆಗ ದ್ರೋಣ, "ನೀನಲ್ತು, ನಿನ್ನಿಂದಮಾ ಕಾರಣಂ" ಎಂದು ಹೇಳಿ, ತನ್ನ ಚಿಂತೆಗೆ ಏಕಲವ್ಯನಲ್ಲಿ ಪರಿಹಾರವಿದೆ ಎಂದು ಉಸುರುತ್ತಾನೆ.

ಆಗ ಏಕಲವ್ಯ, "ಸಮರ್ಪಿಸಿದೆನೆನ್ನ ಸರ್ವಸ್ವವಂ ನಿನ್ನಡಿಗೆ. ಆವುದಾದೊಡಮದನ್ ಬೆಸಸು ನೀನ್" ಎಂದು ಬಿನ್ನವಿಸಿಕೊಳ್ಳುತ್ತಾನೆ. ದ್ರೋಣನಿಗೆ ಅಷ್ಟು ಸಾಕಾಗಿತ್ತು. "ನಾನಿತ್ತ ವಚನಕ್ಕೆ ಭಂಗಮೈತರದಂತೆ, ಮೇಣ್ ಅರ್ಜುನನ ಅದ್ವಿತೀಯತೆ ಲೋಕತ್ರಯಕೆ ನಿಲ್ವಂತೆ, ನೀನಿನಿತು ಶಕ್ತಿಯಂ ತ್ಯಾಗ ಮಾಳ್ಪುದೆ ಅದಕ್ಕೆ ತಗುವ ಪರಿಹಾರಮ್" ಎಂದು ಹೇಳುತ್ತಾನೆ. ಅದಕ್ಕೆ ಆ ಪರಿಶುದ್ಧ ಹೃದಯಿ, "ಬೆಸಸು ಆಚಾರ್ಯ, ಇತ್ತ ಗುರುಪಿಂಗೀವುದೇನ್ ತ್ಯಾಗಮೆ" ಎಂದು ಮುಕ್ತ ಮನಸ್ಸಿನಿಂದ ಹೇಳುತ್ತಾನೆ.



ಏಕಲವ್ಯನ ಆ ನುಡಿಗಳನ್ನು ಕೇಳಿ ನಾಚಿಕೆ ಎನಿಸಿದರೂ, ಅರಸನ ಅನ್ನದ ಋಣದಲ್ಲಿದ್ದ ದ್ರೋಣ, "ದಕ್ಷಿಣೆ–ದಕ್ಷಿಣದ ಪೆರ್‌ಬೆರಳ್. ನಿನ್ ಬಿಲ್ಬಿಜ್ಜೆಗುಸಿರಪ್ಪ ಪೆರ್ ಬೆರಳ್; ಬಾಣಮಂ ಪಿಡಿದು ಸಿಂಜನಿಗುಯ್ವ ಪೆರ್‌ಬೆರಳ್" ಎಂದು, ಏಕಲವ್ಯನ ಬಲಗೈ ಹೆಬ್ಬೆರಳನ್ನೇ ಗುರುದಕ್ಷಿಣೆಯಾಗಿ ಕೇಳುತ್ತಾನೆ.

ಬಹುಶಃ ಇದಕ್ಕಿಂತ ಅಮಾನವೀಯತೆ, ಹೃದಯಹೀನತೆ ಮತ್ತೊಂದಿರಲಾರದು! ತನ್ನನ್ನೇ ನಂಬಿ, "ನನ್ನ ಸರ್ವಸ್ವವನ್ನೂ ನಿನಗರ್ಪಿಸಿರುವೆ" ಎಂದು ಶರಣಾಗತನಾಗಿದ್ದ ಶಿಷ್ಯನಿಂದ ಯಾವ ಗುರುವೂ ಇಂತಹ ದಕ್ಷಿಣೆ ಕೇಳಲಾರ. ಆದರೂ, ಗುರುವಾಣಿಯನ್ನು ಗೌರವಿಸಿದ ಏಕಲವ್ಯ, ಪ್ರತಿ ನುಡಿಯದೆ, "ಕೊಳ್ ಗುರುದೇವ, ನಿನಗೆ ದಕ್ಷಿಣೆ ನನ್ನ ದಕ್ಷಿಣದ ಪೆರ್‌ಬೆರಳ್. ಪರಕೆಗೆಯ್, ಪೊರೆ ನಿನ್ನ ಕಂದನಂ" ಎಂದು 'ಗುರುಕಾಣಿಕೆ' ಸಲ್ಲಿಸುತ್ತಾನೆ!

ಪುರಾಣಕಾರರು ಏಕಲವ್ಯನ "ಗುರುಭಕ್ತಿ"ಯನ್ನು ಮೆರೆದಿದ್ದಾರೆ ನಿಜ. ಆದರೆ, ದ್ರೋಣನ "ಶಿಷ್ಯದ್ರೋಹ"ವನ್ನು ಮರೆಮಾಡಿದ್ದಾರೆಂಬುದೂ ಅಷ್ಟೇ ನಿಜ. ಗುರುಭಕ್ತಿಯನ್ನು ನಿರೀಕ್ಷಿಸುವವನು ಶಿಷ್ಯನ ರಕ್ಷಣೆಯನ್ನು ನೋಡಿಕೊಳ್ಳಬೇಕಾಗಿತ್ತು. ಆದರೆ, ಇಲ್ಲಿ ದ್ರೋಣನು ಸ್ವಹಿತಾಸಕ್ತಿಯಿಂದ ಅತ್ಯಂತ ನೀಚವಾಗಿ ನಡೆದುಕೊಳ್ಳುತ್ತಾನೆ. ಏಕಲವ್ಯ ತನ್ನಲ್ಲಿ ಇಟ್ಟಿದ್ದ ಅನನ್ಯ ಗುರುಭಕ್ತಿಗೆ ದ್ರೋಣನಿತ್ತ ಹರಕೆಯೆಂದರೆ, ಅವನ ಬಿಲ್ವಿದ್ಯೆಯನ್ನೇ ಬಲಿತೆಗೆದುಕೊಂಡದ್ದು; ಅವನ ಹೆಬ್ಬೆರಳನ್ನೇ ಕಡಿಸಿ, ರಕ್ತ ಚೆಲ್ಲಿಸಿ, ಅವನ ಬದುಕನ್ನೇ ದುರಂತಗೊಳಿಸಿದ್ದು!

ಇಷ್ಟಾದರೂ, ದ್ರೋಣನ ಅಮಾನವೀಯ ದೃಷ್ಟಿ ರಕ್ತದೊಡನೆ ಚೆಲ್ಲಿಬಿದ್ದಿದ್ದ ಏಕಲವ್ಯನ ಹೆಬ್ಬೆರಳ ತುಂಡಿನ ಮೇಲೆ ನೆಟ್ಟಿದ್ದಾಗ, "ತಂದೀಪನದನುಂ ಸವ್ಯಸಾಚಿಗೆ ಸಾಕ್ಷಿಯಂ" ಎನ್ನುತ್ತಾನೆ– ಸಿದ್ಧಿಯ ಶಿಖರವನ್ನೇರಿದ್ದ ಆ 'ಶೂದ್ರ' ಹುಡುಗ ಏಕಲವ್ಯ!

ಇದು ಕುವೆಂಪು ಅವರ 'ಬೆರಳ್ಗೆ ಕೊರಳ್' ನೀಡುವ ದ್ರೋಣ–ಏಕಲವ್ಯರ ಚಿತ್ರಣ!



ಮನ ಬಸುರಾದರೆ ಕೈ ಬೆಸಲಾಯಿತ್ತ ಕಂಡೆ
ಕರ್ಪೂರದ ಕಂಪ ಕಿವಿ ಕುಡಿಯಿತ್ತ ಕಂಡೆ
ಮುತ್ತಿನ ಥಾಳವ ಮೂಗು ನುಂಗಿತ್ತ ಕಂಡೆ
ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ
ಒಂದು ನೀಲದೊಳಗೆ ಮೂರು ಲೋಕವಡಗಿತ್ತ ಕಂಡೆ
ಗುಹೇಶ್ವರ

# ವಚನ-ವೈಚಾರಿಕತೆ-ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

*ನಂ. 302/25, ಜೇನುಕಲ್ ಪ್ಯಾರಡೈಸ್,*
*ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್*
*1ನೇ ಹಂತ, ಬೆಂಗಳೂರು - 560 086*

*94810 35983*

ಬಸವಾದಿ ಶರಣರು ಬದುಕಿ ಹೋದ ರೀತಿಯೇ ವಿಶಿಷ್ಟವಾದುದು. ಅವರ ವಿಚಾರಗಳು, ಜೀವನ ಶೈಲಿ ಎಲ್ಲವೂ ಸರಳ ಹಾಗೂ ಆಕರ್ಷಕವಾಗಿದ್ದವು. ಬದುಕಿನ ಎಲ್ಲಾ ಮಗ್ಗುಲಿನ ಸಮಸ್ಯೆಗಳಿಗೆ ಸ್ಪಂದಿಸಿ ಪರಿಹಾರ ಕಂಡುಕೊಂಡ ಅವರು, ತಮ್ಮ ದೈನಂದಿನ ಬದುಕಿನಲ್ಲೂ ಶುಚಿತ್ವ ಕಾಯ್ದುಕೊಂಡರು. ಅತ್ಯಂತ ಕ್ಲಿಷ್ಟಮಯವಾದ ಸಾಮಾಜಿಕ, ಧಾರ್ಮಿಕ, ಅಧ್ಯಾತ್ಮಿಕ ಜೀವನವನ್ನು ಸರಳಗೊಳಿಸಿದ ಶರಣರು, ಕಾಯಕ ಆಚರಣೆ ಅನುಷ್ಠಾನ ಮುಂತಾದ ಹೊಸ ಹೊಸ ಅನ್ವೇಷಣೆಗಳ ಜೊತೆಗೆ ಆಹಾರ ಪದ್ಧತಿಯತ್ತಲೂ ವಿಶೇಷ ಗಮನ ನೀಡಿದರು.ಇಂತಹ ಹಲವಾರು ವಿಷಯಗಳು ಮತ್ತೆ ಮತ್ತೆ ಚರ್ಚೆಗೆ ಬರಲು ಕಾರಣ, ಅಂದಿನ ಆ ಸಿದ್ಧಾಂತಗಳನ್ನು ವೈಜ್ಞಾನಿಕ ಸಂಶೋಧನೆಗಳು ಇಂದು ಸಾಬೀತು ಪಡಿಸಿದಾಗ.

ವಿಜ್ಞಾನಿಗಳಿಗೆ ಇತ್ತೀಚೆಗೆ ಇಂದಿನ ಡೆನ್ಮಾರ್ಕ ಇರುವ ಪ್ರದೇಶದಲ್ಲಿ ೨,೪೦೦ ವರ್ಷಗಳ ಹಿಂದೆ ಹೂಳಲಾಗಿದ್ದ ಸುಮಾರು ೪೦ ವರ್ಷದ ವ್ಯಕ್ತಿಯ ಮೃತಶರೀರ, ಸುರಕ್ಷಿತ ರೂಪದಲ್ಲಿ ಸಿಕ್ಕಿತು. ಇತಿಹಾಸಕಾರರೂ ಜೀವರಸಾಯನಿಕ ವಿಜ್ಞಾನಿಗಳೂ, ಮತ್ತು ಮನೋವಿಜ್ಞಾನಿಗಳು, ಮಮ್ಮಿಯಾಗಿದ್ದ ಆ ಶರೀರವನ್ನು ಅಧ್ಯಯನಕ್ಕೆ ತೆಗೆದುಕೊಂಡರು. ಆ ಮನುಷ್ಯನ ಉದರದಲ್ಲಿದ್ದ ಆಹಾರ ಕಣಗಳನ್ನು ಪರೀಕ್ಷಿಸಿದಾಗ, ಅವರಿಗೆ ತಿಳಿದು ಬಂದ ವಿಷಯವೆಂದರೆ, ಆತ ಸೇವಿಸಿದ ಕೊನೆಯ ಆಹಾರ ಮತ್ತು ಆತನ ನರಮಂಡಲ, ಭಾವನೆಗಳ ಮೇಲೆ ಅದು ಬೀರಿದ್ದ ಭಾಗಶಃ ಪರಿಣಾಮ. ಆತನ ಆಹಾರದಲ್ಲಿ ಬಳಸಲಾಗಿದ್ದ ಬಾರ್ಲಿ, ಅಗಸೇಬೀಜದಂತಹ ಧಾನ್ಯಗಳಷ್ಟೇ ಅಲ್ಲದೇ ಆತ ಸೇವಿಸಿದ್ದ ಮೀನು ಯಾವ ಬಗೆಯದ್ದು, ಆತನ ಕರುಳಿನಲ್ಲಿ ಅಡಗಿದ್ದ ಪರಾವಲಂಬಿ ಸೂಕ್ಷ್ಮಾಣು ಯಾವುದು ಎಂಬುದೂ ಇವರ ಅಧ್ಯಯನದಿಂದ ಹೊರಬಂತು. ಆಗಿನ ಕಾಲದಲ್ಲಿ ಆ ಭೌಗೋಳಿಕ ನೆಲೆಗಟ್ಟಿನಲ್ಲಿ ಸಾಮಾನ್ಯವಾಗಿ ಲಭ್ಯವಿರುವ, ಆ ಜನರ ಸಾಮಾನ್ಯ ಆಹಾರದ ಭಾಗವಾಗಿದ್ದ ಈ ಎಲ್ಲಾ ಪದಾರ್ಥಗಳೂ ಹೊಸದೇನನ್ನೂ ಹೇಳದಿದ್ದರೂ ಆತನ ಉದರದಲ್ಲಿದ ಪರ್ಸಿಕೇರಿಯಾ ಬೀಜಗಳು ಮಾತ್ರ ಎಲ್ಲರ ಗಮನ ಸೆಳೆದವು. ಆ ಬೀಜಗಳನ್ನು ಮನುಷ್ಯ ಬಲಿಯ



ಸಮಯದಲ್ಲಿ ಮಾತ್ರ ಬಳಸಲಾಗುತ್ತಿದ್ದು, ಈತ ನರಬಲಿಯ ಬಲಿಪಶು ಎಂದು ಆಗ ಖಚಿತವಾಯಿತು. ಆತನ ಉದರದಲ್ಲಿದ್ದ ಕೆಲವು ಪರಾವಲಂಬಿ ಜಂತುಗಳಂತೂ ಆತನಿಗೆ ಲಭ್ಯವಿದ್ದ ಆಹಾರ ಮತ್ತು ನೀರಿನ ಕಳಪೆ ಗುಣಮಟ್ಟ, ಸ್ವಚ್ಛತೆಯ ಕೊರತೆಯನ್ನು ಸಾರಿ ಹೇಳುತ್ತಿತ್ತು. ೧೯೯೯ರಲ್ಲಿ ಹೀಗೇ ಪತ್ತೆಯಾಗಿದ್ದಇನ್ಕಾ ನಾಗರಿಕತೆಯ ಬಾಲಕಿಯೊಬ್ಬಳ ಮೃತದೇಹವೂ, ಆಕೆ ಬದುಕಿದ್ದ ಕಾಲದ ಸಾಮಾಜಿಕ ಕಟ್ಟುಪಾಡುಗಳೂ, ಧಾರ್ಮಿಕ ರೀತಿ ನೀತಿಗಳ ಬಗ್ಗೆ ಮಾಹಿತಿ ಒದಗಿಸಿದ್ದವು. ಆಗಲೂ ಹೆಚ್ಚು ಚರ್ಚೆಯಾದದ್ದು ಆಕೆಯ ದೇಹದಲ್ಲಿ ದೊರೆತ ಆಹಾರದ ಅಂಶಗಳು ಮತ್ತು ಅವುಗಳು ಹೇಗೆ ಅವಳ ಮಾನಸಿಕ ಸ್ಥಿತಿಯನ್ನು ಬಿಂಬಿಸಿದವು ಎಂಬುದರ ಬಗೆಗಿನ ವೈಜ್ಞಾನಿಕ ಅಧ್ಯಯನ.

ಇವುಗಳ ವರದಿಗಳನ್ನು ಓದಿದಾಗ ಮನಸ್ಸು ಪಕ್ಕನೇ ೧೨ನೆಯ ಶತಮಾನದ ಶರಣರ ಆಹಾರ ಮತ್ತು ಅದರ ಸೇವನೆಯ ಹಿಂದಿರುವ ವೈಜ್ಞಾನಿಕ ತತ್ವದ ಬಗೆಗೆ ಯೋಚಿಸುವಂತೆ ಮಾಡುತ್ತದೆ. ಅವರು ಸೇವಿಸುವ ಆಹಾರ ಭಾವನಾ ಕೋಶಗಳ ಮೇಲೆ ಯಾವ ಪರಿಣಾಮವನ್ನು ಬೀರುತ್ತದೆ ಎಂಬುದನ್ನು ಅರಿತಿದ್ದರೇನೋ ಎಂಬಂತೆ, ಆಹಾರವನ್ನು ಅವರೆಂದೂ ಬರೀ ಆಹಾರ ಎಂದು ಪರಿಗಣಿಸದೇ ಅದನ್ನು ಲಿಂಗಾರ್ಪಿತವ ಮಾಡಿ ಪ್ರಸಾದವನ್ನಾಗಿಸಿ ಸೇವಿಸುತ್ತಿದ್ದರು. ಅದೂ ಹೇಗೆ? ಕೇವಲ ಹಸಿವ ತಣಿಸುವ ಅಥವಾ ಜಿಹ್ವಾ ಚಪಲಕ್ಕೆ ಅಲ್ಲ. ಅದನ್ನು ಬಸವಣ್ಣನವರು ತಮ್ಮ ವಚನದಲ್ಲಿ ಹೀಗೆ ಹೇಳುತ್ತಾರೆ.

**ಒಡಲ ಕಳವಳಕ್ಕೆ, ಬಾಯ ಸವಿಗೆ**
**ಬಯಸಿ ಉಂಡೆನಾದಡೆ ನಿಮ್ಮ ತೊತ್ತಿನ ಮಗನಲ್ಲ,**
**ಬೇಡೆ ಬೇಡೆ ನಿಮ್ಮ ನಂಬಿದ ಸದ್ಭಕ್ತರ**
**ಅವರೊಕ್ಕುದನುಂಬೆನೆಂದಂತೆ ನಡೆವೆ**
**ಎನ್ನೊಡೆಯ ಕೂಡಲ ಸಂಗಮದೇವನೊಲ್ಲದವರ ಹಿಡಿದೆನಾದಡೆ**
**ನಿಮ್ಮ ಪಾದದ ಆಣೆ.**

ಒಡಲ ಕಳವಳಕ್ಕೆ ಹಸಿವಾಗಿ ಮತ್ತು ಬಾಯ ಸವಿಯ ರುಚಿಗಾಗಿ ಆಸೆ ಪಟ್ಟು ಬಯಸಿ ಉಂಡರೆ ಅದು ಪ್ರಮಾದ. ಕಾರಣ ಶರಣರ ತೊತ್ತಿನ ಮಗನಾದ ನಾನು ಅವರನ್ನು ಬೇಡೆನು, ಕಾಡೆನು. ಅವರೊಕ್ಕುದನುಂಬೆನೆಂದಂತೆ ನಡೆವೆ? ಕಾಯಕ ಮಾಡಿ, ಶರಣರ ಆಜ್ಞೆಯಂತೆ ಆದಾಯವನ್ನು ಸಮಷ್ಟಿಗೆ ಬಳಸುವೆ, ಇದು ಪ್ರಮಾಣವೆಂದು ತಿಳಿಸುತ್ತಾರೆ.

ಆಹಾರ ಸೇವನೆಯ ವಿಧಾನವೂ ಹೇಗಿರಬೇಕು? ಎನ್ನುವುದಕ್ಕೆ ಅವರ ಈ ವಚನ ಸಾಕ್ಷಿಯಾಗಿದೆ-

**ಮೌನದಲುಂಬುವುದು ಆಚಾರವಲ್ಲ**
**ಲಿಂಗಾರ್ಪಿತವ ಮಾಡಿದ ಬಳಿಕ**
**ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು**
**ಕರಣವೃತ್ತಿಗಳಡಗುವವು**
**ಕೂಡಲ ಸಂಗನ ನೆನೆವುತ್ತ ಉಂಡಡೆ.**

ಪ್ರಸಾದದ ಸೇವನೆಯ ಸಮಯದ ಮಾನಸಿಕ ಸ್ಥಿತಿ ದೇಹದ, ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ ಎಂಬುದನ್ನು ಅರಿತವರಂತೆ, ಮನಸ್ಸನ್ನು ಶಾಂತವಾಗಿರಿಸಿಕೊಳ್ಳುವ ಶಿವನಾಮದುಚ್ಚಾರ ಅವಶ್ಯಕ ಎನ್ನುವ ಅವರ ಅಭಿಮತ, ವೈಜ್ಞಾನಿಕ ಸತ್ಯವೂ ಹೌದು.

ಆಹಾರದ ಬಗೆಗೆ ಇಂದು ಹಲವಾರು ಅಭಿಪ್ರಾಯಗಳು ಕೇಳಿ ಬರುತ್ತಿವೆ. ನಾವು ಸೇವಿಸುವ ಅನ್ನದಗುಳು ನಮ್ಮ ಜೀವನವನ್ನು ನಿರ್ಧರಿಸುತ್ತದೆ. ಅದಕ್ಕೆಂದೇ ಶರಣರು ದೇಹ ದಂಡಿಸುವ ಉಪವಾಸ ಕ್ರಮವನ್ನು ಸಹ ವಿರೋಧಿಸುತ್ತಾರೆ. ಹಾಗೆಂದು ಮಿತಿಯಿಲ್ಲದೆ ತಿನ್ನುವುದನ್ನೂ ಅವರು ವಿರೋಧಿಸುವುದು ನಮಗೆ ಕಂಡು ಬರುತ್ತದೆ. ಅಷ್ಟು ಮಾತ್ರವಲ್ಲ ಆಹಾರವನ್ನು ದುಡಿದು ತಿಂದರೆ ಮಾತ್ರ ಅದು ಆಹಾರವಾಗುತ್ತದೆ. ಮಾತ್ರವಲ್ಲ ಅದು ಆರೋಗ್ಯಯುತವಾದ ಮಾನಸ್ಸಿನ ಸ್ಥಿತಿಯನ್ನು ಸಹ ಒಡಗಿಸುತ್ತದೆ ಎನ್ನುವುದಕ್ಕೆ ನಿದರ್ಶನ ಇಲ್ಲಿದೆ.

**ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೆಂತೋ?**
**ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ?**
**ಬೇಯದೆ ಅಶನನುಂಬ ಠಾವಾವುದು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ?**

ಹಾಗೆಯೇ ಅತಿಯಾದ ಆಹಾರವನ್ನುಂಡು ಹರಟೆ ಹೊಡೆಯುತ್ತಾ ಸಮಯ ಕಳೆದರೆ ಶಿವನು ಒಲಿಯುವುದಿಲ್ಲ ಎಂದು ಆಹಾರ ಏನಿರಬೇಕು ಎನ್ನುವುದು ಮಾತ್ರವಲ್ಲ ಉಂಡಮೇಲೆ ಕಾಯಕವನ್ನು ಮಾಡಲೇ ಬೇಕು ಎಂದು ಒತ್ತಿ ಹೇಳುತ್ತಾರೆ. ಶರಣ ಅಂಬಿಗರ ಚೌಡಯ್ಯ.

**ಅತ್ಯಾಹಾರವನುಂಡು ಹೊತ್ತುಗಳೆದು**
**ಹೋಕಿನ ಮಾತನಾಡುತ್ತ**
**ಚಿತ್ತ ಬಂದ ಪರಿಯಲ್ಲಿ ವ್ಯವಹರಿಸಿಕೊಳ್ಳುತ್ತ,**
**ಮತ್ತೆ ಶಿವನ ನೆನೆದೆನೆಂದಡೆ ಶಿವನ ವರ ಎತ್ತಲೆಂದರಿಯದೆಂದಾತ,**
**ನಮ್ಮಂಬಿಗರ ಚೌಡಯ್ಯ.**

ಇಂದು ಜಗತ್ತು " ವೀಗನ್" ಆಹಾರ ಪದ್ಧತಿ ಅಂದರೆ ಶುದ್ಧ ಸಸ್ಯಾಹಾರದತ್ತ ಹೆಚ್ಚು ಒಲವು ತೋರಿಸುತ್ತಿರುವುದನ್ನು ನಾವು ನೋಡುತ್ತೇವೆ. ಜಗತ್ತಿನ ಯಾವ ಭಾಗಕ್ಕೆ ಹೋದರೂ, ವಿಮಾನ, ಪಂಚತಾರಾ ಹೋಟೇಲುಗಳಲ್ಲೂ ವೀಗನ್ ಆಹಾರ ದೊರೆಯುತ್ತದೆ. ವಿಜ್ಞಾನಿಗಳು ಅದು ಅತ್ಯಂತ ಆರೋಗ್ಯಕರವಾದ ಅಹಾರ ಎನ್ನುತ್ತಾರೆ. ಆದರೆ ೧೨ನೆಯ ಶತಮಾನದ ಶರಣರು ಅಂದೇ ಇದನ್ನು ಪ್ರತಿಪಾದಿಸಿದ್ದರು. ಹಾಗೆಂದು ಅವರು ಬೇರೆ ಆಹಾರವನ್ನು ಸೇವಿಸುವವರನ್ನು ಕೀಳಾಗಿ ಕಾಣುತ್ತಿದ್ದರೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ವಚನ ಹೀಗೆ ಹೇಳುತ್ತದೆ.

**ಕುರಿ ಕೋಳಿ ಕಿರಿಮೀನು ತಿಂಬುವರಿಗೆಲ್ಲ ಕುಲಜ ಕುಲಜರೆಂದೆಂಬರು**
**ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು**
**ಅವರೆಂತು ಕೀಳು ಜಾತಿಯಾದರು? ಜಾತಿಗಳು ನೀವೇಕೆ ಕೀಳಾಗಿರೊ?**
**ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿ ಹೋಯಿತು.**
**ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು.**



**ಅದೆಂತೆಂದಡೆ; ಸಿದ್ದಲಿಕೆಯಾಯಿತು, ಸಗ್ಗಳೆಯಾಯಿತು.**
**ಸಿದ್ದಲಿಕೆಯ ತುಪ್ಪವನ್ನು ಸಗ್ಗಲೆಯ ನೀರನ್ನು**
**ಶುದ್ಧವೆಂದು ಕುಡಿವ ಬುದ್ಧಿಗೇಡಿ ವಿಪ್ರರಿಗೆ ನಾಯಕ ನರಕ ತಪ್ಪದಯ್ಯಾ**
**ಉರಲಿಂಗ ಪೆದ್ದಿಗಳ ಅರಸು ಒಲ್ಲನವ್ವಾ.**

ಅವರ ವಿಚಾರ ನಿಜಕ್ಕೂ ಅಚ್ಚರಿಯನುಂಟು ಮಾಡುತ್ತದೆ.

ಇದರ ಜೊತೆಗೆ ಮತ್ತೊಂದು ಅತ್ಯಂತ ಮಹತ್ವದ ವಿಷಯವೆಂದರೆ, ಅವರು ಆಹಾರವನ್ನೆಂದೂ ವ್ಯರ್ಥ ಮಾಡುತ್ತಿರಲಿಲ್ಲ. ಅದು ಪ್ರಸಾದವಾಗಿತ್ತಾದ್ದರಿಂದ ನಿಶ್ಶೇಷವಾಗಿ ಅದನ್ನು ಸೇವಿಸುತ್ತಿದ್ದರು. ಇಂದಿಗೂ ಹಲವರು ಇದೇ ವಿಧಾನವನ್ನು ಅನುಸರಿಸುತ್ತಾರೆ. ಅದನ್ನು ತಟ್ಟೆಯಲ್ಲಿ ಬಿಡುವಂತಿಲ್ಲ ಎಂದಾಗ ಎಷ್ಟು ಬೇಕೋ ಅಷ್ಟು ಮಾತ್ರ ಬಳಕೆಯಾಗುತ್ತದೆ. ಒಂದು ಬಟ್ಟಲು ಅನ್ನವಾಗಬೇಕಾದರೆ ನಿಸರ್ಗದ ಎಷ್ಟೊಂದು ಸಂಪನ್ಮೂಗಳ ಬಳಕೆಯಾಗಿರುತ್ತದೆ. ಇದನ್ನು ಅವರು ಜಾರಿಗೆ ತಂದು ಅನುಸರಿಸಿದ ವಿಧಾನ ಇಂದಿಗೂ ಅನುಕರಣೀಯ.

●

*ಹೇಗಿರಬೇಡ?*

ಒಮ್ಮೆ ಡಾ. ಅಂಬೇಡ್ಕರ್ ಅವರು ತಮ್ಮ ಪತ್ನಿ ರಮಾಬಾಯಿ ಜೊತೆಯಲ್ಲಿ ಮುಂಬಯಿಯಲ್ಲಿ ನಾಟಕ ಪ್ರದರ್ಶನವೊಂದನ್ನು ನೋಡಲು ಹೋಗಿದ್ದರು. ಅದು 'ಅಸ್ಪೃಶ್ಯತೆ'ಯನ್ನು ಕುರಿತ ನಾಟಕ. 'ಅಸ್ಪೃಶ್ಯ'ನೊಬ್ಬನದೇ ಮುಖ್ಯ ಪಾತ್ರ. ಪಾತ್ರದ ಅಗತ್ಯದಂತೆ ಪಾತ್ರಧಾರ ಕೊರಳಲ್ಲಿ ಮಡಕೆ ಮತ್ತು ಸೊಂಟದಲ್ಲಿ ಪೊರಕೆ ಕಟ್ಟಿಕೊಂಡಿರಬೇಕಾಗಿತ್ತು. ಆದರೆ ಆ ಅಸ್ಪೃಶ್ಯನ ಪಾತ್ರಧಾರ ಅವನ್ನು ಕಟ್ಟಿಕೊಳ್ಳದೆಯೇ, ತನ್ನ ಆಂಗಿಕ ಅಭಿನಯದಲ್ಲಿ ಅವು ಇದ್ದಂತೆಯೇ ಅಭಿನಯಿಸಿದ. ಅವನು ಪ್ರತಿಭಾವಂತ ಕಲಾವಿದನಾದ್ದರಿಂದ ಅವನ ಅಭಿನಯ ಪರಿಣಾಮಕಾರಿಯಾಗಿತ್ತು.

ಆ ಪಾತ್ರಾಭಿನಯವನ್ನು ಸೂಕ್ಷ್ಮವಾಗಿ ಗಮನಿಸಿದ ಡಾ. ಅಂಬೇಡ್ಕರ್ ಅವರು ನಾಟಕ ಮುಗಿದ ಮೇಲೆ, ಆ ಪಾತ್ರಧಾರನ ಬಳಿ ಹೋಗಿ ಅವನ ಅಭಿನಯವನ್ನು ಮೆಚ್ಚಿಕೊಂಡು, "ನೀನು ಅಸ್ಪೃಶ್ಯನ ಮಡಕೆ ಮತ್ತು ಪೊರಕೆಗಳನ್ನು ಕಟ್ಟಿಕೊಂಡೇ ಅಭಿನಯಿಸಿದ್ದರೆ ಅದು ಇನ್ನಷ್ಟು ಪರಿಣಾಮಕಾರಿಯಾಗಿರುತ್ತಿತ್ತು" ಎಂದರು. ಅದಕ್ಕೆ ಪಾತ್ರಧಾರಿ, "ನಾನು ಆ ಜಾತಿಯವನಲ್ಲ. ಅವನ್ನು ಕಟ್ಟಿಕೊಂಡಿದ್ದರೆ ನನ್ನ ಜಾತಿಗೆ ಅವಮಾನವಾಗುತ್ತಿತ್ತು. ಹಾಗಾಗಿ ನಾನು ಅವನ್ನು ಬಳಸಲಿಲ್ಲ" ಎಂದ.

ಆಗ ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಅವನನ್ನು ಹತ್ತಿರಕ್ಕೆ ಕರೆದು 'ನಾಟಕಕ್ಕಾಗಿ ಕೇವಲ ಕೆಲವು ನಿಮಿಷಗಳ ಕಾಲ ಮಡಕೆ ಪೊರಕೆಗಳನ್ನು ಕಟ್ಟಿಕೊಳ್ಳಲು ನಿನಗೆ ಮನಸ್ಸು ಬರಲಿಲ್ಲ. ಆದರೆ ಜೀವಮಾನವಿಡೀ ಅವನ್ನು ಕಟ್ಟಿಕೊಂಡು ಬದುಕಬೇಕಾದವರ ಪಾಡು ಹೇಗಿರಬೇಡ?' ಎಂದರಂತೆ!

(ಸಂಗ್ರಹ)

# ಗೊರುಚ ಪ್ರಶಸ್ತಿ ಪ್ರದಾನ – ವರದಿ

ದಿನಾಂಕ:೧.೮.೨೦೨೧ರಂದು ಮೈಸೂರಿನ ಜೆ.ಎಸ್.ಎಸ್. ಮಹಿಳಾ ವಿಶ್ವವಿದ್ಯಾಲಯದ ನವಜ್ಯೋತಿ ಸಭಾಂಗಣದಲ್ಲಿ ಒಂದು ಆಪ್ತ ಕಾರ್ಯಕ್ರಮ ನಡೆಯಿತು. ಅದು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಗೊರುಚ ಪ್ರಶಸ್ತಿ ಪ್ರದಾನ ಸಮಾರಂಭ. ಇಂದಿನ ಕೋವಿಡ್ ಇಕ್ಕಟ್ಟಿನ ಮಧ್ಯೆಯೂ ಸಭಾಂಗಣ ತುಂಬಿ ತುಳುಕುವಷ್ಟು ಸಂಖ್ಯೆಯ ಅಭಿಮಾನಿಗಳು ಸೇರಿದ್ದರು.

ನಿಗದಿತ ಸಮಯಕ್ಕೆ ಸರಿಯಾಗಿ ಕದಳಿ ಬಳಗದ ಶ್ರೀಮತಿ ಶೈಲಾ ಸಿದ್ಧರಾಮಪ್ಪ ಸಂಗಡಿಗರು ಹಾಡಿದ ಶರಣಗೀತೆಯೊಂದಿಗೆ ಆರಂಭವಾದ ಸಮಾರಂಭ. ಪರಿಷತ್ತಿನ ಉಪಾಧ್ಯಕ್ಷರಾದ ಡಾ. ಸಿಂ.ರಾ. ಹೊನ್ನಲಿಂಗಯ್ಯನವರಿಂದ ಸ್ವಾಗತ ಮತ್ತು ಪ್ರಸ್ತಾವನೆ ನಡೆಯಿತು.

ಗೊರುಚ ದತ್ತಿಯನ್ನೇ ಕುರಿತಂತೆ ಅಂತಾರಾಷ್ಟ್ರೀಯ ಸಂವಹನ ತಜ್ಞೆ ಸೋದರಿ ಮಾಯಾಚಂದ್ರ ಮತ್ತು ಸೋದರಿ ಮುಕ್ತಾ ಕಾಗಲಿ ಅವರು ನಿರ್ಮಿಸಿದ ಸಾಕ್ಷ್ಯಚಿತ್ರ ಪ್ರದರ್ಶನದ ನಂತರ ನಾಡಿನ ಹಿರಿಯ ವಿದ್ವಾಂಸರಾದ ಪ್ರೊ. ಮಲೆಯೂರು ಗುರುಸ್ವಾಮಿ ಅವರು ಪ್ರಶಸ್ತಿ ಪುರಸ್ಕೃತರನ್ನು ಅಭಿನಂದಿಸಿ ಮಾತನಾಡಿ, "ಗೊರುಚ ಪ್ರಶಸ್ತಿಗೆ ವಿಶೇಷ ಘನತೆ ಇದ್ದು, ಅತ್ಯಂತ ಅರ್ಹರಿಗೆ ಅವು ದೊರಕುತ್ತಿರುವುದು ಅಭಿಮಾನದ ಸಂಗತಿ" ಎಂದರು.

ಸಮಾರಂಭದ ಸಾನ್ನಿಧ್ಯ ವಹಿಸಿದ್ದ, ಪರಿಷತ್ತಿನ ಗೌರವ ಅಧ್ಯಕ್ಷರೂ ಆಗಿರುವ ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಮತ್ತು ಪೂಜ್ಯ ಶ್ರೀ ಡಾ. ತೋಂಟದ ಸಿದ್ಧರಾಮ ಮಹಾಸ್ವಾಮಿಗಳು ಪ್ರಶಸ್ತಿ ಪುರಸ್ಕೃತರಾದ ಪ್ರೊ.ಬಿ.ಆರ್. ಪಾಟೀಲ, ಶ್ರೀ ಪಿ.ಡಿ. ವಾಲೀಕಾರ, ಡಾ. ಎಚ್.ಟಿ. ಪೋತೆ ಮತ್ತು ಡಾ. ಕುರುವ ಬಸವರಾಜ್ ಅವರಿಗೆ ಪ್ರಶಸ್ತಿ ಫಲಕ, ಗೌರವಧನ ನೀಡಿ ಶಾಲು ಹೊದಿಸಿದರು. ಅಸ್ವಸ್ಥತೆಯಿಂದ ಹಾಜರಾಗಲು ಸಾಧ್ಯವಾಗದ ಡಾ. ಬಿ.ಎಸ್. ಸ್ವಾಮಿ ಅವರ ಪರವಾಗಿ ಅವರ ಬಂಧು ಪ್ರಶಸ್ತಿ ಸ್ವೀಕರಿಸಿದರು. ಪ್ರಶಸ್ತಿ ಪುರಸ್ಕೃತರಲ್ಲಿ ಅನಾರೋಗ್ಯ ಕಾರಣ, ಡಾ.ಸಿ. ವೀರಣ್ಣ, ಡಾ. ಬಸವರಾಜ ಸಾದರ, ಡಾ. ಬಸವರಾಜ ಸಬರದ ಅವರು ಸಮಾರಂಭದಲ್ಲಿ ಪಾಲುಗೊಳ್ಳಲು ಸಾಧ್ಯವಾಗಲಿಲ್ಲ.

ಪ್ರಶಸ್ತಿ ಸ್ವೀಕರಿಸಿದ ನಾಲ್ಕು ಜನ ವಿದ್ವಾಂಸರು ಮಾತನಾಡಿ, ಗೊರುಚ ಅವರ ಹೆಸರಿನ ಪ್ರತಿಷ್ಠಿತ ಪ್ರಶಸ್ತಿ ತಮಗೆ ದೊರೆತದ್ದು ಅಭಿಮಾನವುಂಟು ಮಾಡಿದೆ ಎಂದು ತಿಳಿಸಿ, ಪ್ರಶಸ್ತಿ ಆಯ್ಕೆ ಸಮಿತಿಗೆ ತಮ್ಮ ವಂದನೆ ಸಲ್ಲಿಸಿದರು.

'ಕೋವಿಡ್‌ನಿಂದಾಗಿ ೨೦೧೯ ಮತ್ತು ೨೦೨೦ರ ಪ್ರಶಸ್ತಿಗಳನ್ನು ಒಟ್ಟಿಗೆ ನೀಡಲಾಯಿತು. ಪ್ರಶಸ್ತಿಯ ಗೌರವಧನ: ಗೊರುಚ ಶರಣ ಪ್ರಶಸ್ತಿ–೨೫೦೦೦ ರೂ. ಗೊರುಚ ಜಾನಪದ ಪ್ರಶಸ್ತಿ–೨೫೦೦೦, ಗೊರುಚ ಶರಣ ಸಾಹಿತ್ಯ ಗ್ರಂಥ ಪ್ರಶಸ್ತಿ–೧೦೦೦೦ರೂ. ಮತ್ತು ಗೊರುಚ ಜನಪದ ಸಾಹಿತ್ಯ ಗ್ರಂಥ ಪ್ರಶಸ್ತಿ – ೧೦೦೦೦ರೂ. ಸಾನ್ನಿಧ್ಯ ವಹಿಸಿದ್ದ ಪೂಜ್ಯ



ಶ್ರೀ ಡಾ. ತೋಂಟದ ಸಿದ್ಧರಾಮ ಮಹಾಸ್ವಾಮಿಗಳು 'ಗೊರುಚ ದತ್ತಿ'ಯ ಸದಾಶಯವನ್ನು ತಿಳಿಸಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮತ್ತು ಅದರ ಅಂಗವಾದ ಕದಳಿ ಮಹಿಳಾ ವೇದಿಕೆಯ ಚಟುವಟಿಕೆಗಳು ರಾಷ್ಟ್ರವ್ಯಾಪಿಯಾಗಿರುವುದಕ್ಕೆ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು. ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ, "ಗೊರುಚ ಪ್ರಶಸ್ತಿ ಪಡೆದಿರುವ ಎಲ್ಲರೂ ಪ್ರತಿಭಾನ್ವಿತರಾಗಿದ್ದು, ಅವರು ಗೊರುಚ ಅವರ ಆಸಕ್ತಿಯ ವಚನ ಸಾಹಿತ್ಯ ಮತ್ತು ಜಾನಪದ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಸೇವೆ ಸ್ಮರಣೀಯವಾದುದು" ಎಂದು ಶ್ಲಾಘಿಸಿದರು.

ಸಮಾರಂಭ ಸಂದರ್ಭದಲ್ಲೇ ಮೈಸೂರಿನ ನಿವಾಸಿಗಳಾದ ಶ್ರೀಮತಿ ಶಕುಂತಲಾ ಜಯದೇವ್ ಅವರು, ಈಗಾಗಲೇ ಪರಿಷತ್ತಿನಲ್ಲಿ ಸ್ಥಾಪಿಸಿರುವ ೬ ಲಕ್ಷ ರೂ.ಗಳ ದತ್ತಿಯ ಜೊತೆಗೆ ಇನ್ನೂ ೪ ಲಕ್ಷ ರೂ.ಗಳ ಚೆಕ್ಕನ್ನು ಪರಿಷತ್ತಿನ ಅಧ್ಯಕ್ಷರಿಗೆ ಒಪ್ಪಿಸಿದರು. ಹಾಗೆಯೇ ಕೊಡಗಿನ ಸೋದರಿ ರಾಗಿಣಿ ಪ್ರಕಾಶ್ ಅವರು ತಮ್ಮ ಪತಿ ಲಿಂ. ಡಾ. ಆನಂದ ಪ್ರಕಾಶ್ ಅವರ ಹೆಸರಿನಲ್ಲಿ ದತ್ತಿ ಸ್ಥಾಪಿಸಲು ೨೫,೦೦೦/–ರೂ.ಗಳ ಕೊಡುಗೆ ನೀಡಿದರು. ಮತ್ತೊಂದು ವಿಶೇಷವೆಂದರೆ, ಗೊರುಚ ಪ್ರಶಸ್ತಿ ಪುರಸ್ಕೃತರಲ್ಲಿ ಒಬ್ಬರಾದ ಪ್ರೊ. ಬಿ.ಆರ್. ಪೋಲೀಸ ಪಾಟೀಲ ಅವರೂ ಪ್ರಶಸ್ತಿಯ ಗೌರವಧನದ ಜೊತೆಗೆ ಮತ್ತಷ್ಟು ಕೊಡುಗೆ ಸೇರಿಸಿ, ತಮ್ಮ ತಂದೆ–ತಾಯಿಗಳ ಹೆಸರಿನಲ್ಲಿ ೨೫,೦೦೦/–ರೂ.ಗಳ ದತ್ತಿ ಸ್ಥಾಪಿಸುವುದಾಗಿ ಪ್ರಕಟಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಡಾ. ಗೊ.ರು. ಚನ್ನಬಸಪ್ಪ ಅವರು ವಹಿಸಿದ್ದರು. ಪರಿಷತ್ತಿನ ಉಪಾಧ್ಯಕ್ಷರಲ್ಲಿ ಒಬ್ಬರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಮತ್ತು ಕಾರ್ಯದರ್ಶಿಗಳಲ್ಲಿ ಒಬ್ಬರಾದ ಶ್ರೀ ದಯಾನಂದ ಪಾಟೀಲ ಅವರು ಪೂಜ್ಯದ್ವಯರಿಗೆ ಮಾಲಾರ್ಪಣೆಯ ಗೌರವ ಸಲ್ಲಿಸಿದರು. ಕೊನೆಯಲ್ಲಿ ಕಾರ್ಯಕ್ರಮಕ್ಕೆ ಸಹಯೋಗ ನೀಡಿದ ಮೈಸೂರು ನಗರ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಮ.ಗು. ಸದಾನಂದಯ್ಯ ಅವರು ಸರ್ವರಿಗೂ ವಂದನೆ ಅರ್ಪಿಸಿದರು.

ಸಮಾರಂಭದಲ್ಲಿ ಕನ್ನಡ ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳಾದ ಡಾ. ಮಲ್ಲೇಪುರಂ ಜಿ. ವೆಂಕಟೇಶ್, ಹಿರಿಯ ವಿದ್ವಾಂಸರಾದ ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶನ ಕಲೆಗಳ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ನಾಗೇಶ್ ಬೆಟ್ಟಕೋಟೆ, ವಿಧಾನ ಪರಿಷತ್ ಮಾಜಿ ಸದಸ್ಯರಾದ ಶ್ರೀ ತೋಂಟದಾರ್ಯ – ಹೀಗೆ ಅನೇಕ ಪ್ರಮುಖರು ಮತ್ತು ನಾಡಿನ ನಾನಾ ಭಾಗದ ಅಭಿಮಾನಿಗಳು ಪಾಲುಗೊಂಡಿದ್ದರು. ಪರಿಷತ್ತಿನ ಬಹುತೇಕ ಜಿಲ್ಲಾಧ್ಯಕ್ಷರುಗಳೂ ಭಾಗವಹಿಸಿದ್ದರು.

ನಗರ ಶರಣ ಸಾಹಿತ್ಯ ಪರಿಷತ್ತಿನ ಪ್ರೊ. ಡಿ.ಎಸ್. ಸದಾಶಿವಮೂರ್ತಿ ಅವರು ಕಾರ್ಯಕ್ರಮ ನಿರ್ವಹಣೆ ಮಾಡಿದರು.

ಸಮಾರಂಭಕ್ಕೆ ಸಹಯೋಗ ನೀಡಿದ್ದ ಮೈಸೂರು ನಗರ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಮ.ಗು. ಸದಾನಂದಯ್ಯ ಮತ್ತು ಅವರ ಪದಾಧಿಕಾರಿಗಳು, ಮೈಸೂರು ಗ್ರಾಮಾಂತರ ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ ಮಹಿಳಾ ವೇದಿಕೆಯ ಸಹಕಾರ ಪಡೆದು ಅತ್ಯಂತ ಅಚ್ಚುಕಟ್ಟಾದ ವ್ಯವಸ್ಥೆ ಮಾಡಿದ್ದರು.

ವರದಿ: ಸಮನ್ವಯಾಧಿಕಾರಿ

## ಕ್ಷೇತ್ರ, ವಾರ್ತೆಗಳು

## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ವಿವಿಧ ಜಿಲ್ಲೆಗಳಲ್ಲಿ, ತಾಲ್ಲೂಕುಗಳಲ್ಲಿ ನಡೆದ "ಸಂಸ್ಥಾಪಕರ ದಿನಾಚರಣೆ"ಯ ಭಾವಚಿತ್ರಗಳು, ದಿನಾಂಕ:೨೯.೮.೨೦೨೧



ಬೆಂಗಳೂರಿನ ರಾಜರಾಜೇಶ್ವರಿ ನಗರ ಘಟಕದಲ್ಲಿ



ಬಾಗಲಕೋಟೆಯಲ್ಲಿ



ತುಮಕೂರಿನಲ್ಲಿ





ಬೀದರ್ ಜಿಲ್ಲೆಯಲ್ಲಿ



ಜಮಖಂಡಿ ತಾಲ್ಲೂಕಿನಲ್ಲಿ



ಬೀಳಗಿ ತಾಲ್ಲೂಕಿನಲ್ಲಿ



ಮುಂಡರಗಿ ತಾಲ್ಲೂಕಿನಲ್ಲಿ



ಕೊಪ್ಪಳ ಜಿಲ್ಲೆಯಲ್ಲಿ



ಬೆಂಗಳೂರು ದಕ್ಷಿಣ ಘಟಕದಲ್ಲಿ



ಯಶವಂತಪುರ ಕ್ಷೇತ್ರ ಘಕಟದಲ್ಲಿ



ವಿಜಯನಗರ ಘಟಕದಲ್ಲಿ





ಕೆ.ಆರ್.ಪುರಂ ಘಟಕದಲ್ಲಿ



ಸೇಡಂ ತಾಲ್ಲೂಕಿನಲ್ಲಿ



ದಾವಣಗೆರೆ ಜಿಲ್ಲೆ




ಪಾವಗಡ ತಾಲ್ಲೂಕು



ಬೆಂಗಳೂರು: ರೂ.೨೫೦೦೦/-ಗಳ ದತ್ತಿ ನಿಧಿ ಸ್ಥಾಪನೆ, "ಶ್ರೀಮತಿ ಲಕ್ಷ್ಮೀಬಾಯಿ ಶ್ರೀ ರೇವಣಸಿದ್ದಪ್ಪಗೌಡ ಪೋಲೀಸ್‌ಪಾಟೀಲ ಜಾನಪದ ದತ್ತಿ" ದಿನಾಂಕ:೯.೮.೨೦೨೧, ದತ್ತಿ ದಾನಿಗಳು: ಬಿ.ಆರ್. ಪೋಲೀಸಪಾಟೀಲ
ಚಿತ್ರದಲ್ಲಿ: ದಯಾನಂದ ಪಾಟೀಲ, ಡಾ.ಸಿಂ.ರಾ. ಹೊನ್ನಲಿಂಗಯ್ಯ, ಡಾ.ಗೊ.ರು. ಚನ್ನಬಸಪ್ಪ, ಬಿ.ಆರ್. ಪೋಲೀಸಪಾಟೀಲ, ಕೆ.ವಿ. ನಾಗರಾಜಮೂರ್ತಿ

## ಜಾಹಿರಾತುಗಳು

ಶತಮಾನೋತ್ಸವ ಸಂಭ್ರಮ 1917-2017

## ಶ್ರೀ ಬಸವೇಶ್ವರ ಸಹಕಾರಿ ಬ್ಯಾಂಕ ನಿ., ಬಾಗಲಕೋಟ

## ಪ್ರಧಾನ ಕಛೇರಿ

ಬಸವೇಶ್ವರ ಬ್ಯಾಂಕ್ ಸರ್ಕಲ್, ಸೆಕ್ಟರ್ ನಂ. 25, ನವನಗರ, ಬಾಗಲಕೋಟ

ದೂ: 08354-235311

ವೆಬ್:www.basavabank.com ಇ-ಮೇಲ:basavabank@rediffmail.com

ಸ್ಥಾಪನಾ ದಿನಾಂಕ:02.03.1917 ರಿಜಿಸ್ಟರ್ ನಂ. 1355

ರಿಜರ್ವ ಬ್ಯಾಂಕ ಲೈಸನ್ಸ ನಂ. ಕೆ.ಎ.-815 ಪಿ.ಡಿ. 31.12.1986

ISO9001:2015&27001:2013 Certified Bank



### ಆಡಳಿತ ಮಂಡಳಿ

ಶ್ರೀ ಮೋಹನ ಗು. ವಾಲಿ
ಉಪಾಧ್ಯಕ್ಷರು

ಶ್ರೀ ಪ್ರಕಾಶ ಈ. ತಪಶೆಟ್ಟಿ
ಅಧ್ಯಕ್ಷರು

### ನಿರ್ದೇಶಕರು

ಶ್ರೀ ಚಂದ್ರಶೇಖರಗೌಡ ತ. ಪಾಟೀಲ, ಶ್ರೀ ಹೂವಪ್ಪ ಸೀ. ರಾಠೋಡ, ಶ್ರೀ ವೀರಪ್ಪ, ವಿ. ಶಿರಗಣ್ಣವರ, ಶ್ರೀ ಶ್ರೀಶೈಲ ಚ. ಅರಬ್ಬಿ, ಶ್ರೀ ವಿರೂಪಾಕ್ಷಪ್ಪ ವೀ. ಕಲಬುರ್ಗಿ, ಶ್ರೀ ಶ್ರೀನಿವಾಸ ತಿ. ಬಳ್ಳಾರಿ, ಶ್ರೀ ಭರತಕುಮಾರ ಮು. ಈಟಿ, ಶ್ರೀ ಸಂಗಪ್ಪ ತಿ. ಕಂಕಣಮೇಲಿ, ಶ್ರೀ ರವಿಕುಮಾರ ಯೋ. ಪಟ್ಟಣದ, ಶ್ರೀ ಶಶಿಧರ ಶಿ. ಜಿಗಳೂರ, ಶ್ರೀ ಸಿದ್ಧಲಿಂಗೇಶ್ವರ ಸ. ಗೋಡಿ, ಶ್ರೀ ನಿಂಗಪ್ಪ ಫ. ಪಲ್ಲೇದ, ಶ್ರೀ ಸುರೇಶ ಸು. ಜಂಗಿ, ಶ್ರೀಮತಿ ಜಯಮ್ಮ ಚ. ಅಬ್ಬುಲಪೂರ, ಶ್ರೀಮತಿ ಉಷಾ ಸು. ಜಿಗಜಿನ್ನಿ, ಶ್ರೀ ನಾರಾಯಣ ರಾ. ಕುಲಕರ್ಣಿ, ಶ್ರೀ ಈರಣ್ಣ ಸಂ. ನಾವಲಗಿ

ಶಾಖೆಗಳು: 1) ಪ್ರಧಾನ ಕಛೇರಿ 2) ಬಿ.ವ್ಹಿ.ವ್ಹಿ.ಎಸ್. 3) ಅಡತ ಬಜಾರ 4) ಮಹಿಳಾ 5) ಬೀಳಗಿ 6) ನಿಡಗುಂದಿ 7) ಕೆರೂರ 8) ಅಲಮಟ್ಟಿ 9) ಮುಧೋಳ 10) ತೇರದಾಳ 11) ಬನಹಟ್ಟಿ 12) ಮಹಾಲಿಂಗಪೂರ 13) ಬ. ಬಾಗೇವಾಡಿ 14) ಎ.ಪಿ.ಎಂ.ಸಿ. 15) ವಿದ್ಯಾಗಿರಿ 16) ವಿಜಯಪುರ 17) ಗದಗ 18) ಧಾರವಾಡ 19) ಲಕ್ಷ್ಮೇಶ್ವರ 20) ಲೋಕಾಪೂರ 21) ರಾಮದುರ್ಗ 22) ಬೆಳಗಾವಿ 23) ಗೋಕಾಕ 24) ಮೂಡಲಗಿ 25) ಗಜೇಂದ್ರಗಡ 26) ಮುದ್ದೇಬಿಹಾಳ 27) ಕೋಲ್ಹಾರ

ಅಂಕಿಗಳು ದಿನಾಂಕ: 31.05.2021ಕ್ಕೆ ಇದ್ದಂತೆ

| | | | (ರೂ. ಲಕ್ಷಗಳಲ್ಲಿ) |
|---|---|---|---|
| ಶೇರು ಬಂಡವಾಳ | 2605.04 | ಬ್ಯಾಂಕುಗಳಲ್ಲಿ | 15666.75 |
| ಮೀಸಲು ನಿಧಿ | 1817.63 | ಸರ್ಕಾರಿ ಸೆಕ್ಯೂರಿಟಿಗಳಲ್ಲಿ | 17491.19 |
| ಇತರ ನಿಧಿಗಳು | 5322.87 | ಸಾಲ ವಿತರಿಸಿದ್ದು | 50347.81 |
| ಠೇವುಗಳು | 78346.66 | ಕಟ್ಟಡ ಪೀಠೋಪಕರಣಗಳು | 913.60 |

ದಿನಾಂಕ: 31.03.2021ಕ್ಕೆ ಇದ್ದಂತೆ ಲಾಭ ರೂ.407.29ಲಕ್ಷ

ಅಡಿಟ್ ವರ್ಗ "ಅ"

ಬ್ಯಾಂಕಿನ ಸೌಲಭ್ಯಗಳು: Mobile Banking, ATM Debit Card, SMS Alert, RTGS, NEFT, DBTL, ECS Mandate, POSE-com, CTS Cleaning, Safe Lockers, E-Lobby, IMPS

"ಗ್ರಾಹಕರ ತೃಪ್ತಿಕರ ಸೇವೆಯೇ ನಮ್ಮ ಧ್ಯೇಯ"

ಶ್ರೀ ವಿವೇಕಾನಂದ ಚ. ಕೇಮಾಳಿ
ಪ್ರಧಾನ ವ್ಯವಸ್ಥಾಪಕರು

## "ಸಂಸ್ಥಾಪಕರ ದಿನಾಚರಣೆ" ದಿನಾಂಕ: ೨೯.೮.೨೦೨೧



ಬೆಂಗಳೂರು ಕದಳಿ ಮಹಿಳಾ ವೇದಿಕೆ: ಚಿತ್ರದಲ್ಲಿ: ಬಿ.ಉಮೇಶ್, ನಾ. ಮಲ್ಲಿಕಾರ್ಜುನ, ಎಸ್.ಬಿ. ಅಂಗಡಿ, ಗುರುಪ್ರಸಾದ್ ಕುಚ್ಚಂಗಿ ಬಿ.ಎನ್. ವಿಜಯಕುಮಾರ್, ಸದಾಶಿವಯ್ಯ, ಪ್ರೇಮಾ ಸೋಮಸುಂದರ್, ನಾಗರತ್ನ, ರೇಣುಕಾ ಶಂಕರ್ ಪ್ರಮೀಳಾ ಗರಡಿ, ಚಿತ್ಕಲಾ ರವಿ, ಕೆ.ವಿ. ನಾಗರಾಜಮೂರ್ತಿ



**ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು**

ಬೆಂಗಳೂರು ಗ್ರಾಮಾಂತರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನಲ್ಲಿ "ಸಂಸ್ಥಾಪಕರ ದಿನಾಚರಣೆ"

**ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು**

ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನಲ್ಲಿ "ಸಂಸ್ಥಾಪಕರ ದಿನಾಚರಣೆ"






**ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು**

ಗದಗ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನಲ್ಲಿ "ಸಂಸ್ಥಾಪಕರ ದಿನಾಚರಣೆ"

**ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು**

ಹಾಸನ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನಲ್ಲಿ "ಸಂಸ್ಥಾಪಕರ ದಿನಾಚರಣೆ"



Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine
Date of Publication 1 September 2021
Total Pages 68 (Include Cover Pages)

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

## ದಿನಾಂಕ: 2.8.2021ರಂದು ಮೈಸೂರಿನಲ್ಲಿ ನಡೆದ ಪರಿಷತ್ತಿನ ಕಾರ್ಯಕಾರಿ ಸಮಿತಿ ಸಭೆ



ಚಿತ್ರದಲ್ಲಿ: ಸುಧಾ ಮೃತ್ಯುಂಜಯಪ್ಪ, ಎಸ್.ಬಿ. ಅಂಗಡಿ, ಡಾ. ಗೊ.ರು. ಚನ್ನಬಸಪ್ಪ
ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಪರಮಪೂಜ್ಯ ಜಗದ್ಗುರು ಡಾ. ಶ್ರೀ ತೋಂಟದ ಸಿದ್ಧರಾಮ ಮಹಸ್ವಾಮಿಗಳು, ಕೊಂಡಜ್ಜಿ ಬ. ಷಣ್ಮುಖಪ್ಪ,
ಮಲೆಯೂರು ಗುರುಸ್ವಾಮಿ, ಡಾ. ಸಿಂ.ರಾ. ಹೊನ್ನಲಿಂಗಯ್ಯ, ದಯಾನಂದ ಪಾಟೀಲ, ಡಾ. ಕುರುವ ಬಸವರಾಜ್



ಕಾರ್ಯಕಾರಿ ಸಮಿತಿ ಸಭೆಯಲ್ಲಿ
ನೆರೆದಿದ್ದ
ಪರಿಷತ್ತಿನ ಜಿಲ್ಲಾಧ್ಯಕ್ಷರುಗಳು

To

56 ಡಾ: ಬಿ.ಎಸ್.ಪಾಟೀಲ
'ಆಕಾಶಗಂಗ', ಶಿವಾನಂದನಗರ
ಕಳಸಾಪುರ ರಸ್ತೆ, ಗದಗ – 582 101
87623 32902

Addressee Left without Instruction's
RETURN to SENDER
8 SEP 2021

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1, 3rd Cross, 2nd Main Road,
Kasturiba Nagar, Bengaluru - 560 026

Editor : Dr. M.S. Ashadevi